# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೫೦<br>**Volume 150** | ಬೆಂಗಳೂರು, ಗುರುವಾರ, ಸೆಪ್ಟಂಬರ್ ೧೦, ೨೦೧೫ (ಭಾದ್ರಪದ ೧೯, ಶಕ ವರ್ಷ ೧೯೩೭)<br>**Bengaluru, Thursday, September 10, 2015 (Bhadrapada 19, Shaka Varsha 1937)** | ಸಂಚಿಕೆ ೩೭<br>**Issue 37** |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯಲ್ಲಿ ಬರುವ ಮಾಗಡಿ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾಯೋಜನೆ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ನಅಇ 149 ಬಿಎಂಆರ್ 2013, ದಿನಾಂಕ : 16–09–2013.
2. ಸರ್ಕಾರದ ಆದೇಶ ಸಂಖ್ಯೆ : ನಅಇ 27 ಬಿಎಂಆರ್ 2014, ದಿನಾಂಕ : 05–03–2014.
3. ಪತ್ರ ಸಂಖ್ಯೆ : ಬಿಎಂಆರ್‌ಡಿಎ/ಎಂಪಿಎ/1/2013–14, ದಿನಾಂಕ : 30–03–2015.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಗೆ ಬರುವ ಮಾಗಡಿ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿದ ತಾತ್ಕಾಲಿಕ (Provisional) ಮಹಾಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮ 1961ರ ಕಲಂ 13(1)ರನ್ವಯ ಕೆಲವು ನಿಬಂಧನೆಗಳಿಗೆ ಒಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿತ್ತು.

ನಂತರ, ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸದರಿ ತಾತ್ಕಾಲಿಕ ಮಹಾಯೋಜನೆಗೆ ಸಂಬಂಧಿಸಿದಂತೆ, ಸಾರ್ವಜನಿಕರಿಂದ ಸ್ವೀಕರಿಸಿರುವ ಸಲಹೆ/ಆಕ್ಷೇಪಣೆಗಳನ್ನು ಪರಿಶೀಲಿಸಲು ಮಹಾನಗರ ಆಯುಕ್ತರ ಅಧ್ಯಕ್ಷತೆಯಲ್ಲಿ ಅಧಿಕಾರಿಗಳ ಸಮಿತಿಯನ್ನು ರಚಿಸಲಾಗಿತ್ತು.

ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ಇವರು ನಿಗಧಿತ ಅವಧಿಯೊಳಗೆ ಸ್ವೀಕರಿಸಿರುವ 535 ಆಕ್ಷೇಪಣೆ/ಸಲಹೆಗಳನ್ನು ಪರಿಶೀಲಿಸಿ ಸಮಿತಿ ಮಾಡಿರುವ ಶಿಫಾರಸ್ಸುಗಳ ಆಧಾರದ ಮೇರೆಗೆ ತಾತ್ಕಾಲಿಕ ಮಹಾಯೋಜನೆಯನ್ನು ಪರಿಷ್ಕರಿಸಿ ಅಂತಿಮ ಮಹಾಯೋಜನೆ ತಯಾರಿಸಿ, ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮ 1961ರ ಕಲಂ 13(2) ರನ್ವಯ ಅಗತ್ಯ ಕ್ರಮ ಜರುಗಿಸಿ, ಮೇಲೆ (3)ರಲ್ಲಿ ಓದಲಾದ ಪತ್ರದೊಂದಿಗೆ ಮಹಾಯೋಜನೆಯ ನಕ್ಷೆ ಹಾಗೂ ವರದಿ ಇವುಗಳನ್ನು ಸರ್ಕಾರದ ಅನುಮೋದನೆಗೆ ಸಲ್ಲಿಸಿರುತ್ತಾರೆ.

ಮಾಗಡಿ ಯೋಜನಾ ಪ್ರದೇಶದ ಮಹಾಯೋಜನೆಯನ್ನು 2031ನೇ ಇಸವಿಗೆ ತಯಾರಿಸಿದ್ದು, ಮಾಗಡಿ ಸ್ಥಳೀಯ ಯೋಜನಾ ಪ್ರದೇಶದ ಒಟ್ಟು 9,441.26 ಹೆಕ್ಟೇರ್ ಪ್ರದೇಶವನ್ನು ನಗರದ ಅಭಿವೃದ್ಧಿಗಾಗಿ ನಗರೀಕರಣದ ಎಲ್ಲೆ ಎಂದು ಪ್ರಸ್ತಾಪಿಸಿ ಮಹಾಯೋಜನೆಯನ್ನು ರೂಪಿಸಲಾಗಿದ್ದು, ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮ 1961ರ ಕಲಂ (12)ರಲ್ಲಿ ನಿಗಧಿಪಡಿಸಿರುವ ಅಂಶಗಳನ್ನು ಪರಿಗಣಿಸಿ ನಗರದ ಮುಂದಿನ ಯೋಜಿತ ಬೆಳವಣಿಗೆಗೆ ಪ್ರಸ್ತಾಪಿಸಿರುವ 9.441.26 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 4557.67 ಹೆಕ್ಟೇರ್ (ಶೇ. 49.88), ವಾಣಿಜ್ಯಕ್ಕಾಗಿ 181.43 ಹೆಕ್ಟೇರ್ (ಶೇ. 1.99), ಕೈಗಾರಿಕೆಗಾಗಿ 1382.77 ಹೆಕ್ಟೇರ್ (ಶೇ. 15.14) ಸಾರ್ವಜನಿಕ ಮತ್ತು ಅರೆ ಸಾರ್ವಜನಿಕ ಸೌಲಭ್ಯಕ್ಕಾಗಿ 516.86 ಹೆಕ್ಟೇರ್ (ಶೇ. 5.66), ಉದ್ಯಾನವನ/ಆಟದ ಮೈದಾನ/ಸ್ಮಶಾನ ಪ್ರದೇಶಕ್ಕಾಗಿ 991.47 ಹೆಕ್ಟೇರ್ (ಶೇ. 10.86), ಸಾರ್ವಜನಿಕ ಸೌಲಭ್ಯಕ್ಕಾಗಿ 24.20 ಹೆಕ್ಟೇರ್ (ಶೇ. 0.27), ಸಾರಿಗೆ ಮತ್ತು ಸಂಪರ್ಕಕ್ಕಾಗಿ 1480.53 ಹೆಕ್ಟೇರ್ (ಶೇ. 16.20) ಪ್ರದೇಶವನ್ನು ನಿಗಧಿಪಡಿಸಲಾಗಿದೆ. ಮಹಾಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮ 1961ರ ಕಲಂ 13(3) ರನ್ವಯ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಉದ್ದೇಶಿತ ಮಹಾಯೋಜನೆ ಅಡಿ ಭೂ ಉಪಯೋಗಕ್ಕೆ ಸಂಬಂಧಿಸಿದ ವಿವರ ಈ ಕೆಳಗಿನಂತೆ ಇರುತ್ತದೆ.

| ಕ್ರ ಸಂ. | ಭೂ ಉಪಯೋಗ | ಅನುಮೋದಿತ ಕರಡು ಮಹಾಯೋಜನೆ 2031ರ ಭೂ ಬಳಕೆ ವಿವರ (ಹೆಕ್ಟೇರ್‌ಗಳಲ್ಲಿ) | | ಅಂತಿಮಗೊಳಿಸಿದ ಮಹಾಯೋಜನೆ 2031ರ ಭೂ ಬಳಕೆ ವಿವರ (ಹೆಕ್ಟೇರ್‌ಗಳಲ್ಲಿ) | |
|---|---|---|---|---|---|
| | | ವಿಸ್ತೀರ್ಣ | % | ವಿಸ್ತೀರ್ಣ | % |
| 1 | ವಸತಿ | 4249.21 | 46.62 | 4557.67 | 49.88 |
| 2 | ವಾಣಿಜ್ಯ | 173.20 | 01.90 | 181.43 | 1.99 |
| 3 | ಕೈಗಾರಿಕೆ | 1674.39 | 18.37 | 1382.77 | 15.41 |
| 4 | ಸಾರ್ವಜನಿಕ/ಅರೆ ಸಾರ್ವಜನಿಕ ಮತ್ತು ಸಾರ್ವಜನಿಕ ಸೌಲಭ್ಯ | 512.60 | 05.62 | 516.86 | 5.66 |
| 5 | ಉದ್ಯಾನವನ/ಆಟದ ಮೈದಾನ/ಸ್ಮಶಾನ | 1043.83 | 11.45 | 991.47 | 10.86 |
| 6 | ಸಾರ್ವಜನಿಕ ಸೌಲಭ್ಯ | 24.20 | 0.27 | 24.20 | 0.27 |
| 7 | ಸಾರಿಗೆ ಮತ್ತು ಸಂಪರ್ಕ | 1437.13 | 15.77 | 1480.53 | 16.20 |
| | **ಒಟ್ಟು** | **9114.56** | **100** | **9134.93** | **100.00** |
| 8 | ಜಲಾವೃತ ಪ್ರದೇಶ | 306.33 | | 306.33 | |
| | **ಒಟ್ಟು** | **9420.89** | | **9441.26** | |

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 149 ಬಿಎಂಆರ್ 2013, ಬೆಂಗಳೂರು, ದಿನಾಂಕ : 01-06-2015**

ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಗೆ ಬರುವ ಮಾಗಡಿ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾಯೋಜನೆ 2031ಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮ 1961ರ ಕಲಂ 13(3)ರನ್ವಯ ಈ ಕೆಳಗಿನ ನಿಬಂಧನೆಗಳಿಗೆ ಒಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ.

1) ಈ ಆದೇಶ ಹೊರಡಿಸಿದ ದಿನಾಂಕದಿಂದ ಎರಡು (02) ವರ್ಷಗಳವರೆಗೆ ಪ್ರಾಧಿಕಾರವು ಯಾವುದೇ ಭೂ ಉಪಯೋಗ ಬದಲಾವಣೆ ಪ್ರಸ್ತಾವನೆ ಸಲ್ಲಿಸತಕ್ಕದ್ದಲ್ಲ ;
2) ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದಿಂದ ನಿರ್ಮಿಸಲು ಉದ್ದೇಶಿಸಿರುವ Satelite Town Ring Road (STRR), Individual Town Ring Road (ITRR), Intermediate Ring Road (IRR) ಹಾಗೂ Ring Road (RR) ರಸ್ತೆಗಳ ಅಂತಿಮ ಪಂಕ್ತೀಕರಣವನ್ನು ಅಭಿವೃದ್ಧಿಗೆ ಅನುಮೋದಿಸುವ ಮೊದಲು ಪರಿಶೀಲಿಸತಕ್ಕದ್ದು.
3) ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 69(1)ರ ಪ್ರಕಾರ, ಈ ಆದೇಶದ ದಿನಾಂಕದಿಂದ 5 ವರ್ಷಗಳೊಳಗೆ ಉದ್ಯಾನವನ. ಬಯಲು ಜಾಗ, ಆಟದ ಮೈದಾನ ಮತ್ತು ಸಾರ್ವಜನಿಕ/ಅರೆ ಸಾರ್ವಜನಿಕ ಉಪಯೋಗಕ್ಕೆ ಮೀಸಲಿಟ್ಟ ಜಮೀನುಗಳನ್ನು ನಿಯಮಾನುಸಾರ ಭೂ ಸ್ವಾಧೀನಪಡಿಸಿಕೊಳ್ಳಲು ಕ್ರಮ ವಹಿಸುವುದು.
4) ಮಹಾಯೋಜನೆಯಲ್ಲಿ ಗುರುತಿಸಲಾಗಿರುವ ಸರ್ವೆ ನಂಬರ್‌ಗಳು, ನಾಲೆ/ಅತಿ ಹೆಚ್ಚು ವಿದ್ಯುತ್ ವಾಹಕ ತಂತಿಗಳು/ಹಾಲಿ ರಸ್ತೆ/ಕೆರೆ/ಕೊಳಗಳಲ್ಲಿ ಯಾವುದಾದರೂ ತಪ್ಪಿದ್ದಲ್ಲಿ ಅಂತಹ ತಪ್ಪುಗಳನ್ನು ಸೂಕ್ತ ದಾಖಲೆಗಳೊಂದಿಗೆ ಸ್ಥಳ ಪರಿಶೀಲಿಸಿ ದೃಢಪಡಿಸಿಕೊಂಡು ವಾಸ್ತವಾಂಶಗಳನ್ನು ಗಣನೆಗೆ ತೆಗೆದುಕೊಂಡು ಪ್ರಾಧಿಕಾರವು ಸರಿಪಡಿಸಿಕೊಳ್ಳತಕ್ಕದ್ದು ;
5) ಮಹಾಯೋಜನೆಯಲ್ಲಿ ಗುರುತಿಸಿರುವ ಅಧಿಕ ವಿದ್ಯುತ್‌ವಾಹಕ ತಂತಿ, ರಸ್ತೆ, ನಾಲೆಯ ಪಂಕ್ತೀಕರಣದಲ್ಲಿ ಹಾಗೂ ಭೂಮಿಯ ಮೇಲೆ ಹಾಲಿ ಇರುವ ಪಂಕ್ತೀಕರಣದಲ್ಲಿ ವ್ಯತ್ಯಾಸವಿದ್ದಲ್ಲಿ, ಇರುವ ಪಂಕ್ತೀಕರಣದನ್ವಯ ಗುರುತಿಸಿದ ನಂತರ ಉಳಿಯುವ ಜಾಗವನ್ನು ಜಮೀನಿಗೆ ಹೊಂದಿಕೊಂಡಿರುವ ಭೂ ಉಪಯೋಗವನ್ನು ನಿಗದಿಪಡಿಸಬಹುದು ;
6) ಹಾಲಿ ರಸ್ತೆಯ ಪಂಕ್ತೀಕರಣವನ್ನು ಮಹಾಯೋಜನೆಯಲ್ಲಿ ತಪ್ಪಾಗಿ ಗುರುತಿಸಿದಂತಹ ಪ್ರಕರಣಗಳಲ್ಲಿ ಸೂಕ್ತ ದಾಖಲೆಗಳೊಂದಿಗೆ (Cadastral Map) ಹಾಲಿ ಭೂಮಿಯ ಮೇಲಿರುವ ರಸ್ತೆ ಪಂಕ್ತೀಕರಣವನ್ನು ರಸ್ತೆ ಅಗಲೀಕರಣ ಮಾಡುವಾಗ ಪರಿಗಣನೆಗೆ ತೆಗೆದುಕೊಳ್ಳತಕ್ಕದ್ದು ಹಾಗೂ ಮಹಾಯೋಜನೆಯಲ್ಲಿ ಹಾಲಿ ರಸ್ತೆಯನ್ವಯ ಪಂಕ್ತೀಕರಣ ಅಳವಡಿಸಿಕೊಂಡ ನಂತರ ಉಳಿಯುವ ಜಾಗವನ್ನು ಪ್ರಸ್ತುತ ಜಮೀನಿಗೆ ಹೊಂದಿಕೊಂಡಿರುವ ಭೂ ಉಪಯೋಗ (Higher land use) ನಿಗದಿಪಡಿಸಿಕೊಳ್ಳತಕ್ಕದ್ದು.

ಮಾಗಡಿ ಯೋಜನಾ ಪ್ರದೇಶದ ಮಹಾಯೋಜನೆ-2031ಕ್ಕೆ ಸಂಬಂಧಿಸಿದ ವರದಿ ಮತ್ತು ಭೂ ಉಪಯೋಗ ಯೋಜನೆಯ ಎಲ್ಲಾ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆ ಹಾಕಿ, ಸಂಬಂಧಪಟ್ಟ ಅಧಿಕಾರಿ ಸಹಿ ಮಾಡಲು ಕ್ರಮ ವಹಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ನರಸಿಂಹಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**P.R. 309**

**SC-100**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಯಲ್ಲಿ ಬರುವ ನೆಲಮಂಗಲ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾಯೋಜನೆ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ನಅಇ 150 ಬಿಎಂಆರ್ 2013, ದಿನಾಂಕ : 16-09-2013.
2. ಸರ್ಕಾರದ ಆದೇಶ ಸಂಖ್ಯೆ : ನಅಇ 27 ಬಿಎಂಆರ್ 2014, ದಿನಾಂಕ : 05-03-2014.
3. ಪತ್ರ ಸಂಖ್ಯೆ : ಬಿಎಂಆರ್‌ಡಿಎ/ಎಂಪಿ/ಎನ್‌ಪಿಎ/01/2012-13, ದಿನಾಂಕ : 15-04-2015.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಗೆ ಬರುವ ನೆಲಮಂಗಲ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿದ ಮಹಾಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮ 1961ರ ಕಲಂ 13(1)ರನ್ವಯ ಕೆಲವು ನಿಬಂಧನೆಗಳಿಗೆ ಒಳಪಟ್ಟು ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡಲಾಗಿತ್ತು.

ನಂತರ, ಮೇಲೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮ 1961ರ ಕಲಂ 13(1)ರನ್ವಯ 60 ದಿನಗಳ ಕಾಲಾವಕಾಶ ನೀಡಿ ಸಾರ್ವಜನಿಕರಿಂದ ಸ್ವೀಕರಿಸಿರುವ ಸಲಹೆ/ಆಕ್ಷೇಪಣೆಗಳನ್ನು ಪರಿಶೀಲಿಸುವ ಸಂಬಂಧ ಅಧಿಕಾರಿಗಳ ಸಮಿತಿಯನ್ನು ರಚಿಸಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಮಹಾನಗರ ಆಯುಕ್ತರು, ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರ ಇವರು ನಿಗದಿತ ಅವಧಿಯೊಳಗೆ ಸ್ವೀಕರಿಸಿರುವ 595 ಆಕ್ಷೇಪಣೆ/ಸಲಹೆಗಳನ್ನು ಪರಿಶೀಲಿಸಿ ಸಮಿತಿಯ ಶಿಫಾರಸ್ಸುಗಳ ಆಧಾರದ ಮೇರೆಗೆ ತಾತ್ಕಾಲಿಕ ಅನುಮೋದಿತ ಮಹಾಯೋಜನೆಯನ್ನು ಪರಿಷ್ಕರಿಸಿ ನೆಲಮಂಗಲ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿದ ಮಹಾಯೋಜನೆ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮ 1961ರ ಕಲಂ 13(2) ರನ್ವಯ ಅಗತ್ಯ ಕ್ರಮ ಜರುಗಿಸಿ ಮಹಾಯೋಜನೆಯ ನಕ್ಷೆ ಹಾಗೂ ವರದಿ ತಯಾರಿಸಿ ಸರ್ಕಾರದ ಅನುಮೋದನೆಗೆ ಸಲ್ಲಿಸಿರುತ್ತಾರೆ.

ನೆಲಮಂಗಲ ಸ್ಥಳೀಯ ಯೋಜನಾ ಪ್ರದೇಶದ ಒಟ್ಟು 9071.71 ಹೆಕ್ಟೇರ್ ಪ್ರದೇಶವನ್ನು ನಗರದ ಅಭಿವೃದ್ಧಿಗಾಗಿ ನಗರೀಕರಣದ ಎಲ್ಲೆ ಎಂದು ಪ್ರಸ್ತಾಪಿಸಿ ಮಹಾಯೋಜನೆಯನ್ನು ರೂಪಿಸಲಾಗಿದ್ದು. ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮ 1961ರ ಕಲಂ (12)ರಲ್ಲಿ ನಿಗಧಿಪಡಿಸಿರುವ ಅಂಶಗಳನ್ನು ಪರಿಗಣಿಸಿ ನಗರದ ಮುಂದಿನ ಯೋಜಿತ ಬೆಳವಣಿಗೆಗೆ ಪ್ರಸ್ತಾಪಿಸಿರುವ 9,071.71 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 3362.47 ಹೆಕ್ಟೇರ್ (ಶೇ. 39.24), ವಾಣಿಜ್ಯಕ್ಕಾಗಿ 319.53 ಹೆಕ್ಟೇರ್ (ಶೇ. 3.73), ಕೈಗಾರಿಕೆಗಾಗಿ 2047.51 ಹೆಕ್ಟೇರ್ (ಶೇ. 23.89) ಸಾರ್ವಜನಿಕ/ಅರೆಸಾರ್ವಜನಿಕ ಮತ್ತು ಸಾರ್ವಜನಿಕ ಸೌಲಭ್ಯಕ್ಕಾಗಿ 332.20 ಹೆಕ್ಟೇರ್ (ಶೇ. 3.88), ಉದ್ಯಾನವನ/ಆಟದ ಮೈದಾನ/ಸ್ಮಶಾನ ಪ್ರದೇಶಕ್ಕಾಗಿ 727.46 ಹೆಕ್ಟೇರ್ (ಶೆ. 8.49), ಸಾರ್ವಜನಿಕ ಸೌಲಭ್ಯಕ್ಕಾಗಿ 124.47 ಹೆಕ್ಟೇರ್ (ಶೇ. 1.45), ಸಾರಿಗೆ ಮತ್ತು ಸಂಪರ್ಕಕ್ಕಾಗಿ 1655.78 ಹೆಕ್ಟೇರ್ (ಶೇ. 19.32) ಪ್ರದೇಶವನ್ನು ನಿಗಧಿಪಡಿಸಲಾಗಿದೆ. ಮಹಾಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದ್ದು, ಸದರಿ ಮಹಾಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮ 1961ರ ಕಲಂ 13(3)ರನ್ವಯ ಅಂತಿಮ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಉದ್ದೇಶಿತ ಮಹಾಯೋಜನೆಗೆ ಭೂ ಉಪಯೋಗದ ವಿಶ್ಲೇಷಣೆ ಈ ಕೆಳಗಿನಂತೆ ಇರುತ್ತದೆ.

| ಕ್ರ. ಸಂ. | ಭೂ ಉಪಯೋಗ | ಅನುಮೋದಿತ ಕರಡು ಮಹಾಯೋಜನೆ 2031ರ ಭೂ ಬಳಕೆ ವಿವರ (ಹೆಕ್ಟೇರ್‌ಗಳಲ್ಲಿ) | | ಅಂತಿಮಗೊಳಿಸಿದ ಮಹಾಯೋಜನೆ 2031ರ ಭೂ ಬಳಕೆ ವಿವರ (ಹೆಕ್ಟೇರ್‌ಗಳಲ್ಲಿ) | |
|---|---|---|---|---|---|
| | | ವಿಸ್ತೀರ್ಣ | % | ವಿಸ್ತೀರ್ಣ | % |
| 1 | ವಸತಿ | 3199.61 | 45.49 | 3362.47 | 39.24 |
| 2 | ವಾಣಿಜ್ಯ | 317.09 | 4.51 | 319.53 | 3.73 |
| 3 | ಕೈಗಾರಿಕೆ | 1027.25 | 14.60 | 2047.51 | 23.89 |
| 4 | ಸಾರ್ವಜನಿಕ/ಅರೆ ಸಾರ್ವಜನಿಕ ಮತ್ತು ಸಾರ್ವಜನಿಕ ಸೌಲಭ್ಯ | 295.78 | 4.20 | 332.20 | 3.88 |
| 5 | ಉದ್ಯಾನವನ/ಆಟದ ಮೈದಾನ/ಸ್ಮಶಾನ | 598.85 | 8.51 | 727.46 | 8.49 |
| 6 | ಸಾರ್ವಜನಿಕ ಸೌಲಭ್ಯ | 124.47 | 1.77 | 124.47 | 1.45 |
| 7 | ಸಾರಿಗೆ ಮತ್ತು ಸಂಪರ್ಕ | 1471.09 | 20.91 | 1655.78 | 19.32 |
| | **ಒಟ್ಟು** | **7034.14** | **100** | **8569.42** | **100.00** |
| 8 | ಜಲಾವೃತ ಪ್ರದೇಶ | 305.78 | | 369.70 | |

| | | | | | |
|---|---|---|---|---|---|
| 9. | ಟಿ.ಜಿ.ಆರ್. ವಲಯ–3 ರ ಪ್ರದೇಶ (ತ್ಯಾಮಗೊಂಡ್ಲು ನಗರೀಕರಣ ಎಲ್ಲೆಯಲ್ಲಿ ಮಾತ್ರ) | 132.59 | | 132.59 | |
| | **ಒಟ್ಟು** | **7472.51** | | **9071.71** | |

ಸದರಿ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 150 ಬಿಎಂಆರ್ 2013, ಬೆಂಗಳೂರು, ದಿನಾಂಕ : 01-06-2015**

ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದ ವ್ಯಾಪ್ತಿಗೆ ಬರುವ ನೆಲಮಂಗಲ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಅಂತಿಮ ಮಹಾಯೋಜನೆ 2031ಕ್ಕೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಅಧಿನಿಯಮ 1961ರ ಕಲಂ 13(3)ರನ್ವಯ ಈ ಕೆಳಗಿನ ನಿಬಂಧನೆಗಳಿಗೆ ಒಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ.

1) ಈ ಆದೇಶ ಹೊರಡಿಸಿದ ದಿನಾಂಕದಿಂದ ಎರಡು (02) ವರ್ಷಗಳವರೆಗೆ ಪ್ರಾಧಿಕಾರವು ಯಾವುದೇ ಭೂ ಉಪಯೋಗ ಬದಲಾವಣೆ ಪ್ರಸ್ತಾವನೆ ಸಲ್ಲಿಸತಕ್ಕದ್ದಲ್ಲ ;
2) ಬೆಂಗಳೂರು ಮಹಾನಗರ ಪ್ರದೇಶಾಭಿವೃದ್ಧಿ ಪ್ರಾಧಿಕಾರದಿಂದ ನಿರ್ಮಿಸಲು ಉದ್ದೇಶಿಸಿರುವ Satelite Town Ring Road (STRR), Individual Town Ring Road (ITRR), Intermediate Ring Road (IRR) ಹಾಗೂ Ring Road (RR) ರಸ್ತೆಗಳ ಅಂತಿಮ ಪಂಕ್ತೀಕರಣವನ್ನು ಅಭಿವೃದ್ಧಿಗೆ ಅನುಮೋದಿಸುವ ಮೊದಲು ಪರಿಶೀಲಿಸತಕ್ಕದ್ದು.
3) ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಕಲಂ 69(1)ರ ಪ್ರಕಾರ, ಈ ಆದೇಶದ ದಿನಾಂಕದಿಂದ 5 ವರ್ಷಗಳೊಳಗೆ ಉದ್ಯಾನವನ. ಬಯಲು ಜಾಗ, ಆಟದ ಮೈದಾನ ಮತ್ತು ಸಾರ್ವಜನಿಕ/ಅರೆ ಸಾರ್ವಜನಿಕ ಉಪಯೋಗಕ್ಕೆ ಮೀಸಲಿಟ್ಟ ಜಮೀನುಗಳನ್ನು ನಿಯಮಾನುಸಾರ ಭೂ ಸ್ವಾಧೀನಪಡಿಸಿಕೊಳ್ಳಲು ಕ್ರಮ ವಹಿಸುವುದು.
4) ಮಹಾಯೋಜನೆಯಲ್ಲಿ ಗುರುತಿಸಲಾಗಿರುವ ಸರ್ವೆ ನಂಬರ್‌ಗಳು, ನಾಲೆ/ಅತಿ ಹೆಚ್ಚು ವಿದ್ಯುತ್ ವಾಹಕ ತಂತಿಗಳು/ಹಾಲಿ ರಸ್ತೆ/ಕೆರೆ/ಕೊಳಗಳಲ್ಲಿ ಯಾವುದಾದರೂ ತಪ್ಪಿದ್ದಲ್ಲಿ ಅಂತಹ ತಪ್ಪುಗಳನ್ನು ಸೂಕ್ತ ದಾಖಲೆಗಳೊಂದಿಗೆ ಸ್ಥಳ ಪರಿಶೀಲಿಸಿ ದೃಢಪಡಿಸಿಕೊಂಡು ವಾಸ್ತವಾಂಶಗಳನ್ನು ಗಣನೆಗೆ ತೆಗೆದುಕೊಂಡು ಪ್ರಾಧಿಕಾರವು ಸರಿಪಡಿಸಿಕೊಳ್ಳತಕ್ಕದ್ದು ;
5) ಮಹಾಯೋಜನೆಯಲ್ಲಿ ಗುರುತಿಸಿರುವ ಅಧಿಕ ವಿದ್ಯುತ್‌ವಾಹಕ ತಂತಿ, ರಸ್ತೆ, ನಾಲೆಯ ಪಂಕ್ತೀಕರಣದಲ್ಲಿ ಹಾಗೂ ಭೂಮಿಯ ಮೇಲೆ ಹಾಲಿ ಇರುವ ಪಂಕ್ತೀಕರಣದಲ್ಲಿ ವ್ಯತ್ಯಾಸವಿದ್ದಲ್ಲಿ, ಇರುವ ಪಂಕ್ತೀಕರಣದನ್ವಯ ಗುರುತಿಸಿದ ನಂತರ ಉಳಿಯುವ ಜಾಗವನ್ನು ಜಮೀನಿಗೆ ಹೊಂದಿಕೊಂಡಿರುವ ಭೂ ಉಪಯೋಗವನ್ನು ನಿಗಧಿಪಡಿಸಬಹುದು ;
6) ಹಾಲಿ ರಸ್ತೆಯ ಪಂಕ್ತೀಕರಣವನ್ನು ಮಹಾಯೋಜನೆಯಲ್ಲಿ ತಪ್ಪಾಗಿ ಗುರುತಿಸಿದಂತಹ ಪ್ರಕರಣಗಳಲ್ಲಿ ಸೂಕ್ತ ದಾಖಲೆಗಳೊಂದಿಗೆ (Cadastral Map) ಹಾಲಿ ಭೂಮಿಯ ಮೇಲಿರುವ ರಸ್ತೆ ಪಂಕ್ತೀಕರಣವನ್ನು ರಸ್ತೆ ಅಗಲೀಕರಣ ಮಾಡುವಾಗ ಪರಿಗಣನೆಗೆ ತೆಗೆದುಕೊಳ್ಳತಕ್ಕದ್ದು ಹಾಗೂ ಮಹಾಯೋಜನೆಯಲ್ಲಿ ಹಾಲಿ ರಸ್ತೆಯನ್ವಯ ಪಂಕ್ತೀಕರಣ ಅಳವಡಿಸಿಕೊಂಡ ನಂತರ ಉಳಿಯುವ ಜಾಗವನ್ನು ಪ್ರಸ್ತುತ ಜಮೀನಿಗೆ ಹೊಂದಿಕೊಂಡಿರುವ ಭೂ ಉಪಯೋಗ (Higher land use) ನಿಗಧಿಪಡಿಸಿಕೊಳ್ಳತಕ್ಕದ್ದು.

ನೆಲಮಂಗಲ ಯೋಜನಾ ಪ್ರದೇಶದ ಮಹಾಯೋಜನೆ–2031ಕ್ಕೆ ಸಂಬಂಧಿಸಿದ ವರದಿ ಮತ್ತು ಭೂ ಉಪಯೋಗ ಯೋಜನೆಯ ಎಲ್ಲಾ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆ ಹಾಕಿ, ಸಂಬಂಧಪಟ್ಟ ಅಧಿಕಾರಿ ಸಹಿ ಮಾಡಲು ಕ್ರಮ ವಹಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ನರಸಿಂಹಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**P.R. 310**
**SC-100**

## ಇಂಧನ ಸಚಿವಾಲಯ

**ವಿಷಯ :** ರಾಜ್ಯದ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಸಕ್ರಮಗೊಂಡ 50,000 ನೀರಾವರಿ ಪಂಪ್‌ಸೆಟ್‌ಗಳಿಗೆ ಮೂಲಸೌಕರ್ಯ ಒದಗಿಸುವ ಬಗ್ಗೆ.

**ಓದಲಾಗಿದೆ :** 2015–16ನೇ ಸಾಲಿನ ಆಯವ್ಯಯ ಘೋಷಣೆ.

**ಪ್ರಸ್ತಾವನೆ :**

1. 2015–16ನೇ ಸಾಲಿನ ಆಯವ್ಯಯ ಘೋಷಣೆಯಂತೆ, ರಾಜ್ಯದ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಸಕ್ರಮಗೊಂಡ 50,000 ನೀರಾವರಿ ಪಂಪ್‌ಸೆಟ್‌ಗಳಿಗೆ ಮೂಲಭೂತ ಸೌಕರ್ಯವನ್ನು ಕಲ್ಪಿಸಲು ಉದ್ದೇಶಿಸಲಾಗಿದೆ.
2. ನೀರಾವರಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸುವ ಕಾರ್ಯವು ಒಂದು ನಿರಂತರ ಪ್ರಕ್ರಿಯೆಯಾಗಿರುತ್ತದೆ.
3. ವಿದ್ಯುತ್ ಸಂಪರ್ಕ ಪಡೆಯಲು ಅರ್ಜಿ ನೋಂದಾಯಿಸಿ, ಠೇವಣಿ ಶುಲ್ಕ ಮತ್ತು ಮೂಲಸೌಕರ್ಯ ಶುಲ್ಕವನ್ನು ಪಾವತಿಸಿದ ಎಲ್ಲಾ ಪಂಪ್‌ಸೆಟ್‌ಗಳಿಗೆ ಮೂಲಸೌಕರ್ಯವನ್ನು ರಚಿಸಿ, ವಿದ್ಯುತ್ ಸಂಪರ್ಕ ಕಲ್ಪಿಸಲಾಗುತ್ತಿದೆ. ಮೂಲಭೂತ ಸೌಕರ್ಯ ರಚನೆಯಿಂದ ನೀರಾವರಿ ಪಂಪ್‌ಸೆಟ್‌ಗಳಿಗೆ ಗುಣಮಟ್ಟದ ವಿದ್ಯುತ್ ಪೂರೈಸಲು ಅನುಕೂಲವಾಗಲಿದೆ. ರಾಜ್ಯದಲ್ಲಿ ಇನ್ನೂ ಸುಮಾರು 1 ಲಕ್ಷದಷ್ಟು ನೀರಾವರಿ ಪಂಪ್‌ಸೆಟ್‌ಗಳಿಗೆ ಮೂಲಭೂತಸೌಕರ್ಯ ರಚನೆಯ ಬಾಕಿಯಿದ್ದು, 2015–16ನೇ ಸಾಲಿನಲ್ಲಿ ಕನಿಷ್ಠ 50,000 ನೀರಾವರಿ ಪಂಪ್‌ಸೆಟ್‌ಗಳಿಗೆ ಮೂಲಭೂತಸೌಕರ್ಯ ಒದಗಿಸುವ ಗುರಿ ಹೊಂದಲಾಗಿದೆ.

ಈ ನಿಟ್ಟಿನಲ್ಲಿ ರಾಜ್ಯದ ಎಲ್ಲಾ ವಿದ್ಯುತ್ ಸರಬರಾಜು ಕಂಪನಿಗಳು ಹಣ ಪಾವತಿಸಿರುವ ಎಲ್ಲಾ ನೀರಾವರಿ ಪಂಪ್‌ಸೆಟ್‌ಗಳಿಗೆ ಕಡ್ಡಾಯವಾಗಿ ಮೂಲಭೂತಸೌಕರ್ಯ ರಚಿಸಲು ಯೋಜನಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಬೇಕೆಂದು ಸೂಚಿಸಲಾಗಿದೆ.

ಈ ಹಿನ್ನೆಲೆಯಲ್ಲಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 35 ವಿಎಸ್‌ಸಿ 2015, ಬೆಂಗಳೂರು, ದಿನಾಂಕ : 06-06-2015.**

**"ರಾಜ್ಯದ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಸಕ್ರಮಗೊಂಡ 50,000 ನೀರಾವರಿ ಪಂಪ್‌ಸೆಟ್‌ಗಳಿಗೆ ಮೂಲಸೌಕರ್ಯ ಒದಗಿಸುವ ಕ್ರಮ ಕೈಗೊಳ್ಳುವಂತೆ ಆದೇಶ ಹೊರಡಿಸಲಾಗಿದೆ".**

ನೀರಾವರಿ ಪಂಪ್‌ಸೆಟ್‌ಗಳಿಗೆ ಮೂಲಭೂತ ಸೌಕರ್ಯ ಕಲ್ಪಿಸಲು ತಗಲುವ ವೆಚ್ಚವನ್ನು ವಿದ್ಯುತ್ ಸರಬರಾಜು ಕಂಪನಿಗಳೇ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಎನ್. ಯಡ್ರಾವಿ**

ಸರ್ಕಾರದ ಉಪ ಕಾರ್ಯದರ್ಶಿ,

ಇಂಧನ ಇಲಾಖೆ.

**P.R. 339**

## ಇಂಧನ ಸಚಿವಾಲಯ

**ವಿಷಯ :** ಹುಬ್ಬಳ್ಳಿ, ಗುಲ್ಬರ್ಗಾ, ಮಂಗಳೂರು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ವಿದ್ಯುತ್ ಸಂಬಂಧಿತ ದೂರುಗಳನ್ನು ಪರಿಹರಿಸಲು ಗಣಕೀಕೃತ ಕೇಂದ್ರೀಯ ದೂರು ವಿಭಾಗವನ್ನು ಸ್ಥಾಪಿಸುವ ಕುರಿತು.

**ಓದಲಾಗಿದೆ :** 2015-16ನೇ ಸಾಲಿನ ಆಯವ್ಯಯ ಘೋಷಣೆ.

**ಪ್ರಸ್ತಾವನೆ :**

1. 2015-16ನೇ ಸಾಲಿನ ಆಯವ್ಯಯದಲ್ಲಿ ಹುಬ್ಬಳ್ಳಿ, ಗುಲ್ಬರ್ಗಾ, ಮಂಗಳೂರು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ವಿದ್ಯುತ್ ಸಂಬಂಧಿತ ದೂರುಗಳನ್ನು ಪರಿಹರಿಸಲು ಗಣಕೀಕೃತ ಕೇಂದ್ರೀಯ ದೂರು ವಿಭಾಗವನ್ನು ಸ್ಥಾಪಿಸಲು ಉದ್ದೇಶಿಸಿ, ಘೋಷಿಸಲಾಗಿದೆ.
2. ರಾಜ್ಯದಲ್ಲಿ ವಿದ್ಯುತ್ ಗ್ರಾಹಕರು ಪ್ರತಿ ದಿನ ಎದುರಿಸುತ್ತಿರುವ ವಿದ್ಯುತ್ ಸಂಬಂಧಿತ ಸಮಸ್ಯೆಗಳನ್ನು ನಿರ್ದಿಷ್ಟ ಅವಧಿಯಲ್ಲಿ ಪರಿಹರಿಸಿ, ಗ್ರಾಹಕರಿಗೆ ಉತ್ತಮ ಗುಣಮಟ್ಟದ ಮತ್ತು ಸಮರ್ಪಕ ವಿದ್ಯುತ್ ಪೂರೈಕೆ ಮಾಡುವುದು ವಿದ್ಯುತ್ ಸರಬರಾಜು ಕಂಪನಿಗಳ ಆದ್ಯ ಕರ್ತವ್ಯವಾಗಿರುತ್ತದೆ.
3. ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಗಣಕೀಕೃತ ಕೇಂದ್ರೀಯ ದೂರು ವಿಭಾಗದ ಸ್ಥಾಪನೆಯಿಂದ ದಾಖಲಾದ ದೂರುಗಳನ್ನು ತ್ವರಿತವಾಗಿ ಸಂಬಂಧಪಟ್ಟ ಶಾಖೆಗೆ ವರ್ಗಾಯಿಸಿ, ಶೀಘ್ರ ಪರಿಹಾರ ಕಂಡುಕೊಳ್ಳಬಹುದಾಗಿದೆ. ಇದಲ್ಲದೇ, ದಾಖಲಾದ ದೂರುಗಳ ಸಮಗ್ರ ವಿವರಗಳು ನಿಖರವಾಗಿ ಲಭ್ಯವಿದ್ದು, ನಿಗಮ ಕಛೇರಿ ಮಟ್ಟದಲ್ಲಿಯೂ ಸಹ ಮೇಲ್ವಿಚಾರಣೆ ನಡೆಸಲು ಅನುಕೂಲವಾಗಲಿದೆ. ಇದರಿಂದ, ದೂರು ದಾಖಲಾದ ನಂತರ ಸಮಸ್ಯೆಯನ್ನು ಬಗೆಹರಿಸಲು ತೆಗೆದುಕೊಳ್ಳುವ ಪ್ರತಿಕ್ರಿಯೆಯ ಅವಧಿಯು ಕಡಿಮೆಯಾಗಲಿದೆ. ಗಣಕೀಕೃತ ಕೇಂದ್ರೀಯ ದೂರು ವಿಭಾಗವು ದಿನದ 24 ಗಂಟೆಗಳೂ ಸಹ ಕಾರ್ಯನಿರ್ವಹಿಸಲಿದೆ.
4. ಈಗಾಗಲೇ, ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯಲ್ಲಿ ಗಣಕೀಕೃತ ಕೇಂದ್ರೀಯ ದೂರು ವಿಭಾಗವನ್ನು ಸ್ಥಾಪಿಸಲಾಗಿದ್ದು, ಅದೇ ರೀತಿ, ಹುಬ್ಬಳ್ಳಿ, ಗುಲ್ಬರ್ಗಾ, ಮಂಗಳೂರು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ಕಂಪನಿಗಳಲ್ಲಿಯೂ ಸಹ ಆಧುನಿಕ ತಂತ್ರಜ್ಞಾನವನ್ನು ಅಳವಡಿಸಿ, 24 X 7 ಗಣಕೀಕೃತ ದೂರು ವಿಭಾಗವನ್ನು ಸ್ಥಾಪಿಸಲು ಕ್ರಮ ಕೈಗೊಳ್ಳಬೇಕಾಗಿದೆ.

ಈ ಹಿನ್ನೆಲೆಯಲ್ಲಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 35 ವಿಎಸ್‌ಸಿ 2015, ಬೆಂಗಳೂರು, ದಿನಾಂಕ : 06-06-2015.**

**"2015-16ರ ಆಯವ್ಯಯ ಘೋಷಣೆಯ ಆಶಯದಂತೆ, ಹುಬ್ಬಳ್ಳಿ, ಗುಲ್ಬರ್ಗಾ, ಮಂಗಳೂರು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ವಿದ್ಯುತ್ ಸಂಬಂಧಿತ ದೂರುಗಳನ್ನು ಪರಿಹರಿಸಲು ಗಣಕೀಕೃತ ಕೇಂದ್ರೀಯ ದೂರು ವಿಭಾಗವನ್ನು ಅನುಷ್ಠಾನಗೊಳಿಸಲು ಆದೇಶಿಸಲಾಗಿದೆ".**

ಗಣಕೀಕೃತ ಕೇಂದ್ರೀಯ ದೂರು ವಿಭಾಗದ ಸ್ಥಾಪನೆಗೆ ತಗಲುವ ವೆಚ್ಚವನ್ನು ಸಂಬಂಧಪಟ್ಟ ವಿದ್ಯುತ್ ಸರಬರಾಜು ಕಂಪನಿಗಳು ಸ್ವಂತ ಆರ್ಥಿಕ ಸಂಪನ್ಮೂಲದಲ್ಲಿ ಭರಿಸುವುದು ಹಾಗೂ ಸದರಿ ವಿಭಾಗವನ್ನು 24 X 7 ಅವಧಿಯಲ್ಲಿ ಕಾರ್ಯನಿರ್ವಹಿಸಲು ಕ್ರಮ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಎನ್. ಯಡ್ರಾವಿ**

ಸರ್ಕಾರದ ಉಪ ಕಾರ್ಯದರ್ಶಿ,

ಇಂಧನ ಇಲಾಖೆ.

**P.R. 340**

## ಇಂಧನ ಸಚಿವಾಲಯ

**ವಿಷಯ :** 2015-16ನೇ ಸಾಲಿನಲ್ಲಿ ವಿದ್ಯುತ್ ಪ್ರಸರಣ ಜಾಲದ ಬಲವರ್ಧನೆಗಾಗಿ 75 ಹೊಸ ವಿದ್ಯುತ್ ಉಪಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ.

**ಓದಲಾಗಿದೆ :** 2015-16ನೇ ಸಾಲಿನ ಆಯವ್ಯಯ ಘೋಷಣೆ.

**ಪ್ರಸ್ತಾವನೆ :**

1. ರಾಜ್ಯದ ವಿದ್ಯುತ್ ಪ್ರಸರಣ ಜಾಲದ ಬಲವರ್ಧನೆಗಾಗಿ 2015-16ನೇ ಸಾಲಿನಲ್ಲಿ ವಿವಿಧ ವೋಲ್ಟೇಜ್ ವರ್ಗಗಳ 75 ಹೊಸ ವಿದ್ಯುತ್ ಉಪಕೇಂದ್ರಗಳನ್ನು ಸ್ಥಾಪಿಸಲು ಉದ್ದೇಶಿಸಲಾಗಿದೆ.

2. ಈ ಯೋಜನಾ ಕಾರ್ಯಕ್ರಮದಿಂದ ವಿದ್ಯುತ್ ಪ್ರಸರಣೆಯು ಸರಾಗವಾಗಲಿದ್ದು, ವಿವಿಧ ಪ್ರದೇಶಗಳ ವೋಲ್ಟೇಜ್ ಸಮಸ್ಯೆಯು ಉತ್ತಮಗೊಂಡು, ಪ್ರಸರಣ ನಷ್ಟವು ಕಡಿಮೆಯಾಗಿ, ಗುಣಮಟ್ಟದ ವಿದ್ಯುತ್ ಪ್ರಸರಣೆಗೆ ಅನುಕೂಲವಾಗಲಿದೆ.
3. ಪ್ರತಿ ವರ್ಷದ ವಿದ್ಯುತ್ ವಿತರಣಾ ಹೊರೆಯೂ ಸುಮಾರು ಶೇಕಡಾ 8–10 ರಷ್ಟು ಏರಿಕೆಯಾಗುತ್ತಿದ್ದು, ಹೊಸ ಉಪಕೇಂದ್ರಗಳ ಸ್ಥಾಪನೆಯಿಂದ ವಿದ್ಯುತ್ ಪ್ರಸರಣ ನಿರ್ವಹಣೆಯನ್ನು ಮಾಡಲು ಅನುಕೂಲವಾಗಲಿದೆ.
4. ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಪ್ರತಿ ವರ್ಷ ಸರಾಸರಿ 30 ಹೊಸ ಉಪಕೇಂದ್ರಗಳನ್ನು ತನ್ನ ವಾರ್ಷಿಕ ಬಂಡವಾಳ ಕಾಮಗಾರಿ ಯೋಜನೆಯಡಿಯಲ್ಲಿ ಸುಮಾರು ಸರಾಸರಿ **ರೂ. 450.00 ಕೋಟಿಗಳ** ವೆಚ್ಚದಲ್ಲಿ ಸ್ವಂತ ಆರ್ಥಿಕ ಸಂಪನ್ಮೂಲದ ಸಹಾಯದಿಂದ ಸ್ಥಾಪಿಸುತ್ತಿದೆ. ಇದರಿಂದಾಗಿ, ಪ್ರಸ್ತುತ ರಾಜ್ಯದ ವಿದ್ಯುತ್ ಪ್ರಸರಣ ನಷ್ಟವು ಶೇಕಡಾ 3.8 ರಷ್ಟಿದ್ದು, ದೇಶದಲ್ಲಿಯೇ ಅತೀ ಕಡಿಮೆ ಪ್ರಸರಣ ನಷ್ಟ ಹೊಂದಿರುವ ರಾಜ್ಯವೆನಿಸಿದೆ.

ವಿದ್ಯುತ್ ಉಪಕೇಂದ್ರಗಳ ಸ್ಥಾಪನೆ ಮತ್ತು ಇತರೆ ಪ್ರಸರಣ ಕಾಮಗಾರಿಗಳಿಗೆ ವಿನಿಯೋಗಿಸುವ ಹಣವನ್ನು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಮುಂದೆ ಮಂಡಿಸಿ, ಅನುಮೋದನೆ ಪಡೆದು, ತದನಂತರ ಪ್ರಸರಣ ಜಕಾತಿಯನ್ನು ನಿರ್ಧರಿಸಲಾಗುತ್ತಿದೆ.

ಇದೇ ವಿಧಾನದಲ್ಲಿ ಹೊಸ 75 ಉಪಕೇಂದ್ರಗಳ ಸ್ಥಾಪನೆಗೆ ಬೇಕಾಗುವ ಹಣವನ್ನು ಭರಿಸಲು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಕ್ರಮ ವಹಿಸಬೇಕಾಗುವುದು.

ಈ ಹಿನ್ನೆಲೆಯಲ್ಲಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 35 ವಿಎಸ್‌ಸಿ 2015, ಬೆಂಗಳೂರು, ದಿನಾಂಕ : 06–06–2015.**

**"2015–16ನೇ ಸಾಲಿನಲ್ಲಿ ರಾಜ್ಯದ ವಿದ್ಯುತ್ ಪ್ರಸರಣ ಜಾಲದ ಬಲವರ್ಧನೆಗಾಗಿ 75 ವಿವಿಧ ವೋಲ್ಟೇಜ್ ವರ್ಗಗಳ ಹೊಸ ಉಪಕೇಂದ್ರಗಳನ್ನು ಸ್ಥಾಪಿಸಲು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಕ್ರಮ ಕೈಗೊಳ್ಳಬೇಕೆಂದು ಆದೇಶಿಸಲಾಗಿದೆ".**

ಹೊಸ ವಿದ್ಯುತ್ ಉಪಕೇಂದ್ರಗಳ ಸ್ಥಾಪನೆಗೆ ಬೇಕಾಗುವ ಆರ್ಥಿಕ ಸಂಪನ್ಮೂಲವನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ತನ್ನ ವಾರ್ಷಿಕ ಬಂಡವಾಳ ಕಾಮಗಾರಿ ಯೋಜನೆಯಡಿಯಲ್ಲಿ ನಿರ್ವಹಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಎನ್. ಯಡ್ರಾವಿ**
ಸರ್ಕಾರದ ಉಪ ಕಾರ್ಯದರ್ಶಿ,
ಇಂಧನ ಇಲಾಖೆ.

**P.R. 341**

## ಇಂಧನ ಸಚಿವಾಲಯ

**ವಿಷಯ :** ಹುಬ್ಬಳ್ಳಿ, ಗುಲ್ಬರ್ಗಾ, ಮಂಗಳೂರು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಆಧುನಿಕ ಸ್ವಯಂ ಚಾಲಿತ ವಿದ್ಯುತ್ ಮಾಪಕ ಪರೀಕ್ಷಾ ಪ್ರಯೋಗಾಲಯವನ್ನು ಸ್ಥಾಪಿಸುವ ಕುರಿತು.

**ಓದಲಾಗಿದೆ :** 2015–16ನೇ ಸಾಲಿನ ಆಯವ್ಯಯ ಘೋಷಣೆ.

**ಪ್ರಸ್ತಾವನೆ :**

1. 2015–16ನೇ ಸಾಲಿನ ಆಯವ್ಯಯದಲ್ಲಿ ಹುಬ್ಬಳ್ಳಿ, ಗುಲ್ಬರ್ಗಾ, ಮಂಗಳೂರು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಆಧುನಿಕ ಸ್ವಯಂ ಚಾಲಿತ ವಿದ್ಯುತ್ ಮಾಪಕ ಪರೀಕ್ಷಾ ಪ್ರಯೋಗಾಲಯವನ್ನು ಸ್ಥಾಪಿಸಲು ಉದ್ದೇಶಿಸಲಾಗಿದೆ.
2. ವಿದ್ಯುತ್ ಸರಬರಾಜು ಕಂಪನಿಗಳು ಖರೀದಿಸುತ್ತಿರುವ ಸಿಂಗಲ್ ಫೇಸ್ ಮತ್ತು 3 ಫೇಸ್ ವಿದ್ಯುತ್ ಮಾಪಕಗಳ ಗುಣಮಟ್ಟತೆ ಹಾಗೂ ಕಾರ್ಯಕ್ಷಮತೆಯನ್ನು ಖಾತ್ರಿಪಡಿಸಿಕೊಳ್ಳುವುದು ಅವಶ್ಯವಾಗಿರುತ್ತದೆ.
3. ವಿದ್ಯುತ್ ಗ್ರಾಹಕರ ಸ್ಥಾವರಗಳಿಗೆ ಅಳವಡಿಸುವ ಮಾಪಕಗಳ ಕಾರ್ಯನಿರ್ವಹಣೆಯಲ್ಲಿ ದೂರು ದಾಖಲಾದಲ್ಲಿ ಮಾಪಕಗಳನ್ನು ಪರೀಕ್ಷೆಗೆ ಒಳಪಡಿಸುವ ಅಗತ್ಯತೆಯಿರುತ್ತದೆ. ಅದರಂತೆ, ಗ್ರಾಹಕರ ಮಾಪಕಗಳನ್ನು ವಿದ್ಯುತ್ ಸರಬರಾಜು ಕಂಪನಿಗಳ ಮಾಪಕ ವಿಭಾಗ ಕಛೇರಿಯಲ್ಲಿ ಪರೀಕ್ಷೆಗೆ ಒಳಪಡಿಸಬೇಕಾಗುತ್ತದೆ.
4. ಈ ವ್ಯವಸ್ಥೆಯು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯಲ್ಲಿ ಜಾರಿಯಲ್ಲಿದ್ದು, ಉಳಿದ 4 ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಆಧುನಿಕ ಸ್ವಯಂ ಚಾಲಿತ ವಿದ್ಯುತ್ ಮಾಪಕ ಪರೀಕ್ಷಾ ಪ್ರಯೋಗಾಲಯವನ್ನು ಸ್ಥಾಪಿಸುವ ಅಗತ್ಯವಿರುತ್ತದೆ. ಸದರಿ ಪ್ರಯೋಗಾಲಯದ ಸ್ಥಾಪನೆಯಿಂದ ಒಟ್ಟಿಗೆ 20–40 ಮಾಪಕಗಳನ್ನು ಪರೀಕ್ಷೆಗೆ ಒಳಪಡಿಸಬಹುದಾಗಿದೆ. ಈ ವ್ಯವಸ್ಥೆಯಿಂದ ಮಾಪಕಗಳನ್ನು ಪರೀಕ್ಷೆಗಾಗಿ CPRI ಪ್ರಯೋಗಾಲಯಕ್ಕೆ ಕಳುಹಿಸಿ, ಪರೀಕ್ಷಿಸಲು ತೆಗೆದುಕೊಳ್ಳುವ ಸಮಯದ ವಿಳಂಬವನ್ನು ತಪ್ಪಿಸಬಹುದಾಗಿದೆ.
5. ಆಧುನಿಕ ಸ್ವಯಂ ಚಾಲಿತ ಮಾಪಕ ಪರೀಕ್ಷಾ ಪ್ರಯೋಗಾಲಯದಲ್ಲಿ ಪರೀಕ್ಷೆಗೊಳಪಡುವ ಮಾಪಕಗಳು ಹೆಚ್ಚು ನಿಖರವಾಗಿರುವುದಲ್ಲದೇ, ಗಣಕೀಕೃತ ವ್ಯವಸ್ಥೆಯಿಂದ ಕೂಡಿದ್ದು, ಮಾನವ ಹಸ್ತಕ್ಷೇಪವನ್ನು ತಡೆಗಟ್ಟಬಹುದಾಗಿದೆ.

ಈ ಹಿನ್ನೆಲೆಯಲ್ಲಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 35 ವಿಎಸ್‌ಸಿ 2015, ಬೆಂಗಳೂರು, ದಿನಾಂಕ : 06–06–2015.**

**ಹುಬ್ಬಳ್ಳಿ, ಗುಲ್ಬರ್ಗಾ, ಮಂಗಳೂರು ಮತ್ತು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಆಧುನಿಕ ಸ್ವಯಂ ಚಾಲಿತ ವಿದ್ಯುತ್ ಮಾಪಕ ಪರೀಕ್ಷಾ ಪ್ರಯೋಗಾಲಯವನ್ನು ಸ್ಥಾಪಿಸಲು ಆದೇಶಿಸಲಾಗಿದೆ".**

ಆಧುನಿಕ ಸ್ವಯಂ ಚಾಲಿತ ಮಾಪಕ ಪರೀಕ್ಷಾ ಪ್ರಯೋಗಾಲಯದ ಸ್ಥಾಪನೆಗೆ ತಗಲುವ ವೆಚ್ಚವನ್ನು ಸಂಬಂಧಪಟ್ಟ ವಿದ್ಯುತ್ ಸರಬರಾಜು ಕಂಪನಿಗಳು ಸ್ವಂತ ಆರ್ಥಿಕ ಸಂಪನ್ಮೂಲದಲ್ಲಿ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 342

**ಜಿ.ಎನ್. ಯಡ್ರಾವಿ**

ಸರ್ಕಾರದ ಉಪ ಕಾರ್ಯದರ್ಶಿ,

ಇಂಧನ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ನಗರಾಭಿವೃದ್ಧಿ ಇಲಾಖೆಯ ವ್ಯಾಪ್ತಿಯಲ್ಲಿನ ನಗರಾಭಿವೃದ್ಧಿ ಪ್ರಾಧಿಕಾರಗಳಡಿಯಲ್ಲಿ ಅನುಷ್ಠಾನಗೊಳ್ಳುವ ಕಾಮಗಾರಿಗಳ ಟೆಂಡರ್‌ಗಳ ಪರಿಶೀಲನೆ ಮತ್ತು ಅನುಮೋದನೆಗೆ ಸಂಬಂಧಿಸಿದಂತೆ ಟೆಂಡರ್ ಪರಿಶೀಲನಾ ಸಮಿತಿ ಹಾಗೂ ಟೆಂಡರ್ ಅಂಗೀಕಾರ ಸಮಿತಿಗಳನ್ನು ರಚಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶದ ಸಂಖ್ಯೆ : ನಅಇ 05 ಟಿಟಿಪಿ 2014, ದಿನಾಂಕ : 20–08–2014,
2. ಸರ್ಕಾರದ ಆದೇಶದ ಸಂಖ್ಯೆ : FD 1 TFP 2002, ದಿನಾಂಕ : 20–01–2003 ಮತ್ತು FD 1 TFP 2008, ದಿನಾಂಕ : 16–05–2008.
3. ಕೆ.ಟಿ.ಪಿ.ಪಿ. ಕಾಯ್ದೆ 1999 ಸೆಕ್ಷನ್ 9 & 10 ಹಾಗೂ ಕೆ.ಟಿ.ಪಿ.ಪಿ. ನಿಯಮಗಳು 2000ದ ನಿಯಮ 20 ರಂತೆ.

**ಪ್ರಸ್ತಾವನೆ :**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ನಗರಾಭಿವೃದ್ಧಿ ಇಲಾಖೆಯ ವ್ಯಾಪ್ತಿಯಲ್ಲಿನ ಎಲ್ಲಾ ನಗರಾಭಿವೃದ್ಧಿ ಪ್ರಾಧಿಕಾರಗಳಡಿಯಲ್ಲಿ ಬಹಳಷ್ಟು ಮೊತ್ತದ ಕಾಮಗಾರಿಗಳು ಅನುಷ್ಠಾನಗೊಳ್ಳುತ್ತಿದ್ದು, ಮೇಲೆ ಓದಲಾದ ಉಲ್ಲೇಖಿತ (1)ರ ಸರ್ಕಾರಿ ಆದೇಶದಲ್ಲಿ ರೂ. 1 ಕೋಟಿಗಳವರೆಗಿನ ಕಾಮಗಾರಿಗಳ ಅಂದಾಜು ಪಟ್ಟಿಗಳು ಮತ್ತು ಟೆಂಡರ್‌ಗಳಿಗೆ ಅನುಮೋದನೆ ನೀಡಲು ಆಯಾ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಲಾಗಿದೆ. ರಾಜ್ಯದ ನಗರಾಭಿವೃದ್ಧಿ ಪ್ರಾಧಿಕಾರಗಳಡಿಯಲ್ಲಿ ಅನುಷ್ಠಾನಗೊಳ್ಳುವ ರೂ. 1 ಕೋಟಿ ಹಾಗೂ ಅದಕ್ಕೂ ಮೇಲ್ಪಟ್ಟ ಎಲ್ಲಾ ಕಾಮಗಾರಿಗಳ ಅಂದಾಜು ಪಟ್ಟಿಗಳು ಹಾಗೂ ಟೆಂಡರ್‌ಗಳ ಅನುಮೋದನೆಗೆ ಸಂಬಂಧಿಸಿದಂತೆ ಸರ್ಕಾರದಿಂದ ಆಡಳಿತಾತ್ಮಕ ಅನುಮೋದನೆ ಪಡೆಯಬೇಕಾಗಿರುತ್ತದೆ. ಮೇಲೆ ಓದಲಾದ ಉಲ್ಲೇಖಿತ(2)ರ ಸರ್ಕಾರಿ ಆದೇಶಗಳಲ್ಲಿ ಕಾಮಗಾರಿಗಳ ಟೆಂಡರ್‌ಗಳನ್ನು ಕೆಟಿಪಿಪಿ ಕಾಯ್ದೆ ಮತ್ತು ನಿಯಮಗಳನ್ವಯ ಅಂಗೀಕರಿಸಲು ಸರ್ಕಾರದ ಕಾರ್ಯದರ್ಶಿಯವರಿಗೆ ಅಧಿಕಾರ ಪ್ರತ್ಯಾಯೋಜಿಸಲಾಗಿದೆ. ಮೇಲೆ ಓದಲಾದ ಉಲ್ಲೇಖ (3) ರ ಕೆ.ಟಿ.ಪಿ.ಪಿ. ಕಾಯ್ದೆ 1999 ಸೆಕ್ಷನ್ 9 ಮತ್ತು 10 ಹಾಗೂ ಕೆ.ಟಿ.ಪಿ.ಪಿ. ನಿಯಮಗಳು 2000ರ ನಿಯಮ 20 ರಂತೆ ರೂ. 1 ಕೋಟಿಗೂ ಮೇಲ್ಪಟ್ಟ ಟೆಂಡರ್‌ಗಳ ಅನುಮೋದನೆಗೆ ಸಂಬಂಧಿಸಿದಂತೆ ಟೆಂಡರ್ ಅಂಗೀಕಾರ ಪ್ರಾಧಿಕಾರವು ಸರ್ಕಾರವೇ ಆಗಿದ್ದು, ಮೇಲಿನ ಕಲಂಗಳನ್ವಯ ಸರ್ಕಾರದ ಅನುಮೋದನೆಗಾಗಿ ಸಲ್ಲಿಸುವ ರೂ. 1 ಕೋಟಿಗೂ ಮೇಲ್ಪಟ್ಟ ಯಾವುದೇ ಕಾಮಗಾರಿಗಳ ಟೆಂಡರ್‌ಗಳ ಪರಿಶೀಲನೆಗೆ ಸಂಬಂಧಿಸಿದಂತೆ ಟೆಂಡರ್ ಅಂಗೀಕಾರ ಪ್ರಾಧಿಕಾರವು ಟೆಂಡರ್ ಪರಿಶೀಲನಾ ಸಮಿತಿ ಮತ್ತು ಟೆಂಡರ್ ಅಂಗೀಕಾರ ಸಮಿತಿಗಳನ್ನು ರಚಿಸಲು ಅಧಿಕಾರವಿರುವುದರಿಂದ ನಗರಾಭಿವೃದ್ಧಿ ಪ್ರಾಧಿಕಾರಗಳ ಟೆಂಡರ್‌ಗಳ ತಾಂತ್ರಿಕ ಬಿಡ್ಡುಗಳ ಪರಿಶೀಲನೆ ಹಾಗೂ ಆರ್ಥಿಕ ಬಿಡ್ಡುಗಳ ಪರಿಶೀಲನೆಗಾಗಿ ಜಿಲ್ಲಾ ಮಟ್ಟದಲ್ಲಿ ಟೆಂಡರ್ ಪರಿಶೀಲನಾ ಸಮಿತಿಯನ್ನು ರಚಿಸುವುದು ಹಾಗೂ ಸರ್ಕಾರದ ಮಟ್ಟದಲ್ಲಿ ಟೆಂಡರ್ ಅಂಗೀಕಾರ ಸಮಿತಿಯನ್ನು ರಚಿಸುವುದು ಅವಶ್ಯಕವಾಗಿರುತ್ತದೆ.

ಈ ರೀತಿ ರಚಿತವಾದ ಜಿಲ್ಲಾ ಮಟ್ಟದ ಟೆಂಡರ್ ಪರಿಶೀಲನಾ ಸಮಿತಿಯು ಕಾಮಗಾರಿಯ ಟೆಂಡರ್ ಪ್ರಕ್ರಿಯೆಯು ಕೆ.ಟಿ.ಪಿ.ಪಿ. ಕಾಯ್ದೆ 1999 ಹಾಗೂ ಕೆ.ಟಿ.ಪಿ.ಪಿ. ನಿಯಮಗಳು 2000ರಲ್ಲಿನ ಎಲ್ಲಾ ನಿಯಮಗಳನ್ನು ಪಾಲಿಸಿಕೊಂಡು ಟೆಂಡರ್ ಡಾಕ್ಯುಮೆಂಟ್‌ನಲ್ಲಿನ ಎಲ್ಲಾ ಅರ್ಹತಾ ನಿಯಮಗಳನ್ನು ಪೂರೈಸಿರುವ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ಕಾಮಗಾರಿಯ ಟೆಂಡರ್‌ಗೆ ಸಂಬಂಧಿಸಿದ ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ಡುಗಳ ವಿವರಗಳನ್ನು ಅಗತ್ಯ ನಮೂನೆಗಳಲ್ಲಿ ದಾಖಲಿಸಿ ಟೆಂಡರ್ ಪರಿಶೀಲನಾ ಸಮಿತಿಯ ಸ್ಪಷ್ಟ ಶಿಫಾರಸ್ಸಿನೊಂದಿಗೆ ಅನುಮೋದನೆಗಾಗಿ ಸರ್ಕಾರಕ್ಕೆ ಸಲ್ಲಿಸಬೇಕಾಗಿರುತ್ತದೆ.

ಜಿಲ್ಲಾ ಮಟ್ಟದ ಟೆಂಡರ್ ಪರಿಶೀಲನಾ ಸಮಿತಿಯಿಂದ ಅನುಮೋದನೆಗಾಗಿ ಸರ್ಕಾರಕ್ಕೆ ಸಲ್ಲಿಕೆಯಾದ ಕಾಮಗಾರಿಯ ಟೆಂಡರ್‌ಗೆ ಸಂಬಂಧಿಸಿದ ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ಡುಗಳನ್ನು ಸರ್ಕಾರದ ಮಟ್ಟದಲ್ಲಿ ರಚಿತವಾದ ಟೆಂಡರ್ ಅಂಗೀಕಾರ ಸಮಿತಿಯು ಪರಿಶೀಲಿಸಿ ಅನುಮೋದನೆ ನೀಡಬೇಕಾಗಿರುತ್ತದೆ. ಮೇಲ್ಕಂಡ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ, ಕೆ.ಟಿ.ಪಿ.ಪಿ. ಕಾಯ್ದೆ 1999ರ ಕಲಂ 9 ಮತ್ತು 10 ಹಾಗೂ ಕೆ.ಟಿ.ಪಿ.ಪಿ. ನಿಯಮಗಳು 2000ರ ನಿಯಮ 20ರಲ್ಲಿ ಪ್ರದತ್ತವಾದ ಅಧಿಕಾರದಂತೆ ನಗರಾಭಿವೃದ್ಧಿ ಪ್ರಾಧಿಕಾರಗಳಡಿಯಲ್ಲಿನ ರೂ. 1 ಕೋಟಿಗೂ ಮೇಲ್ಪಟ್ಟ ಯಾವುದೇ ಕಾಮಗಾರಿಗಳ ಟೆಂಡರ್‌ಗಳ ತಾಂತ್ರಿಕ ಬಿಡ್ಡುಗಳು ಹಾಗೂ ಆರ್ಥಿಕ ಬಿಡ್ಡುಗಳ ಪರಿಶೀಲನೆಗಾಗಿ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಟೆಂಡರ್ ಪರಿಶೀಲನಾ ಸಮಿತಿಯನ್ನು ರಚಿಸುವುದು ಹಾಗೂ ಟೆಂಡರ್‌ಗಳ ಅನುಮೋದನೆಗಾಗಿ ರಾಜ್ಯ ಮಟ್ಟದಲ್ಲಿ ಟೆಂಡರ್ ಅಂಗೀಕಾರ ಸಮಿತಿಯನ್ನು ರಚಿಸುವ ಬಗ್ಗೆ ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ನಅಇ 271 ಮೈಅಪ್ರಾ 2015, ಬೆಂಗಳೂರು, ದಿನಾಂಕ : 08–06–2015.**

1) ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ನಗರಾಭಿವೃದ್ಧಿ ಇಲಾಖೆಯ ವ್ಯಾಪ್ತಿಯಲ್ಲಿನ ನಗರಾಭಿವೃದ್ಧಿ ಪ್ರಾಧಿಕಾರಗಳಡಿಯಲ್ಲಿ ಅನುಷ್ಠಾನಗೊಳ್ಳುವ ರೂ. 1 ಕೋಟಿಗೂ ಮೇಲ್ಪಟ್ಟ ಎಲ್ಲಾ ರೀತಿಯ ಕಾಮಗಾರಿಗಳ ಟೆಂಡರ್‌ಗಳ ತಾಂತ್ರಿಕ ಬಿಡ್ಡುಗಳು ಮತ್ತು ಆರ್ಥಿಕ ಬಿಡ್ಡುಗಳ ಪರಿಶೀಲನೆಗಾಗಿ ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಟೆಂಡರ್ ಪರಿಶೀಲನಾ ಸಮಿತಿಯನ್ನು ಈ ಕೆಳಕಂಡಂತೆ ರಚಿಸಿ ಆದೇಶಿಸಲಾಗಿದೆ.

| ಜಿಲ್ಲಾ ಮಟ್ಟದ ಟೆಂಡರ್ ಪರಿಶೀಲನಾ ಸಮಿತಿ | | |
|---|---|---|
| 1. | ಆಯಾ ಜಿಲ್ಲೆಯ ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2. | ಆಯಾ ಜಿಲ್ಲಾ ಕೇಂದ್ರದಲ್ಲಿನ ಲೋಕೋಪಯೋಗಿ ಇಲಾಖೆಯ ಕಾರ್ಯಪಾಲಕ ಅಭಿಯಂತರರು | ಸದಸ್ಯರು |
| 3. | ಆಯಾ ಜಿಲ್ಲಾ ಕೇಂದ್ರದಲ್ಲಿನ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಕಾರ್ಯಪಾಲಕ ಅಭಿಯಂತರರು | ಸದಸ್ಯರು |
| 4. | ಆಯಾ ಜಿಲ್ಲಾ ಕೇಂದ್ರದಲ್ಲಿನ ವಿದ್ಯುತ್ ಸರಬರಾಜು ಕಂಪನಿಯ ಕಾರ್ಯಪಾಲಕ ಅಭಿಯಂತರರು | ಸದಸ್ಯರು |
| 5. | ಆಯಾ ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧೀಕ್ಷಕ ಅಭಿಯಂತರರು/ ಕಾರ್ಯಪಾಲಕ ಅಭಿಯಂತರರು/ ಸಹಾಯಕ ಕಾರ್ಯಪಾಲಕ ಅಭಿಯಂತರರು. | ಸದಸ್ಯರು |
| 6. | ಆಯಾ ನಗರಾಭಿವೃದ್ಧಿ ಪ್ರಾಧಿಕಾರದ ನಗರ ಯೋಜಕ ಸದಸ್ಯರು | ಸದಸ್ಯರು |
| 7. | ಯೋಜನಾ ನಿರ್ದೇಶಕರು, ಜಿಲ್ಲಾ ನಗರಾಭಿವೃದ್ಧಿ ಕೋಶ | ಸದಸ್ಯರು |
| 8. | ಆಯಾ ನಗರಾಭಿವೃದ್ಧಿ ಪ್ರಾಧಿಕಾರದ ಆಯುಕ್ತರು | ಸದಸ್ಯ ಕಾರ್ಯದರ್ಶಿ |

ಮೇಲಿನಂತೆ ರಚಿತವಾದ ಜಿಲ್ಲಾ ಮಟ್ಟದ ಟೆಂಡರ್ ಪರಿಶೀಲನಾ ಸಮಿತಿಯು ಮೊದಲಿಗೆ ರೂ. 1 ಕೋಟಿಗೂ ಮೇಲ್ಪಟ್ಟ ಕಾಮಗಾರಿಗಳ ಟೆಂಡರ್‌ಗಳ ತಾಂತ್ರಿಕ ಬಿಡ್ಡುಗಳನ್ನು ಕೆ.ಟಿ.ಪಿ.ಪಿ. ಕಾಯ್ದೆ 1999 ಹಾಗೂ ನಿಯಮಗಳು 2000 ದಲ್ಲಿನ ಎಲ್ಲಾ ಕಲಂಗಳನ್ನು ಪಾಲಿಸಿಕೊಂಡಿರುವ ಬಗ್ಗೆ ಹಾಗೂ ಕಾಮಗಾರಿಯ ಟೆಂಡರ್ ಡಾಕ್ಯುಮೆಂಟ್‌ನಲ್ಲಿನ ಎಲ್ಲಾ ಅರ್ಹತಾ ನಿಯಮಗಳನ್ನು ಪೂರೈಸಿರುವ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ಎಲ್ಲಾ ವಿವರಗಳನ್ನು ಅಗತ್ಯ ನಮೂನೆಯಲ್ಲಿ ದಾಖಲಿಸಿ ಜಿಲ್ಲಾ ಮಟ್ಟದ ಟೆಂಡರ್ ಪರಿಶೀಲನಾ ಸಮಿತಿಯ ಶಿಫಾರಸ್ಸಿನೊಂದಿಗೆ ಸರ್ಕಾರದ ಅನುಮೋದನೆಗಾಗಿ ಸಲ್ಲಿಸುವುದು.

ಸರ್ಕಾರದಿಂದ ಕಾಮಗಾರಿಯ ಟೆಂಡರ್‌ನ ತಾಂತ್ರಿಕ ಬಿಡ್ಡಿಗೆ ಅನುಮೋದನೆಯಾದ ನಂತರ ಜಿಲ್ಲಾ ಮಟ್ಟದ ಟೆಂಡರ್ ಪರಿಶೀಲನಾ ಸಮಿತಿಯು ತಾಂತ್ರಿಕ ಬಿಡ್‌ನಲ್ಲಿ ಅರ್ಹರಾಗಿರುವ ಗುತ್ತಿಗೆದಾರರ ಆರ್ಥಿಕ ಬಿಡ್ಡುಗಳನ್ನು ತೆರೆದು ಆರ್ಥಿಕ ಬಿಡ್ಡುಗಳ ವಿವರಗಳನ್ನು ತುಲನಾತ್ಮಕ ಪಟ್ಟಿಯಲ್ಲಿ ದಾಖಲಿಸಿ ಶಿಫಾರಸ್ಸಿನೊಂದಿಗೆ ಆರ್ಥಿಕ ಬಿಡ್ಡುಗಳನ್ನು ಅನುಮೋದನೆಗಾಗಿ ಸರ್ಕಾರಕ್ಕೆ ಸಲ್ಲಿಸುವುದು.

2) ಮುಂದುವರೆದು, ನಗರಾಭಿವೃದ್ಧಿ ಇಲಾಖೆಯ ವ್ಯಾಪ್ತಿಯಲ್ಲಿನ ನಗರಾಭಿವೃದ್ಧಿ ಪ್ರಾಧಿಕಾರಗಳಡಿಯಲ್ಲಿ ಅನುಷ್ಠಾನಗೊಳ್ಳುವ ರೂ. 1 ಕೋಟಿಗೂ ಮೇಲ್ಪಟ್ಟ ಎಲ್ಲಾ ರೀತಿಯ ಕಾಮಗಾರಿಗಳ ಟೆಂಡರ್‌ಗಳಿಗೆ ಅನುಮೋದನೆ ನೀಡಲು (ತಾಂತ್ರಿಕ ಬಿಡ್ಡುಗಳು ಮತ್ತು ಆರ್ಥಿಕ ಬಿಡ್ಡುಗಳು) ಸರ್ಕಾರದ ಮಟ್ಟದಲ್ಲಿ ಈ ಕೆಳಕಂಡಂತೆ ಟೆಂಡರ್ ಅಂಗೀಕಾರ ಸಮಿತಿಯನ್ನು ರಚಿಸಲಾಗಿದೆ. ಈ ರೀತಿ ರಚಿಸಲಾದ ಟೆಂಡರ್ ಅಂಗೀಕಾರ ಸಮಿತಿಯು ಸರ್ಕಾರದ ಮಟ್ಟದಲ್ಲಿನ ಟೆಂಡರ್ ಅಂಗೀಕಾರ ಪ್ರಾಧಿಕಾರವಾಗಿರುತ್ತದೆ.

| ಸರ್ಕಾರ ಮಟ್ಟದ ಟೆಂಡರ್ ಅಂಗೀಕಾರ ಸಮಿತಿ | | |
|---|---|---|
| 1. | ಸರ್ಕಾರದ ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ | ಅಧ್ಯಕ್ಷರು |
| 2. | ಸರ್ಕಾರದ ಕಾರ್ಯದರ್ಶಿಗಳು, ಲೋಕೋಪಯೋಗಿ ಇಲಾಖೆ | ಸದಸ್ಯರು |
| 3. | ಸಂಬಂಧಿಸಿದ ನಗರಾಭಿವೃದ್ಧಿ ಪ್ರಾಧಿಕಾರದ ಆಯುಕ್ತರು | ಸದಸ್ಯರು |
| 4. | ಅಧೀಕ್ಷಕ ಅಭಿಯಂತರರು, ಪೌರಾಡಳಿತ ನಿರ್ದೇಶಕರ ಕಛೇರಿ, ಪೌರಾಡಳಿತ ನಿರ್ದೇಶನಾಲಯ | ಸದಸ್ಯರು |
| 5. | ಅಧೀಕ್ಷಕ ಅಭಿಯಂತರರು, ತಾಂತ್ರಿಕ ಕೋಶ, ನಗರಾಭಿವೃದ್ಧಿ ಇಲಾಖೆ | ಸದಸ್ಯರು ಕಾರ್ಯದರ್ಶಿ |

ಮೇಲಿನಂತೆ ರಚಿತವಾದ ಸರ್ಕಾರದ ಮಟ್ಟದ ಟೆಂಡರ್ ಅಂಗೀಕಾರ ಸಮಿತಿಯು ಜಿಲ್ಲಾ ಮಟ್ಟದ ಟೆಂಡರ್ ಪರಿಶೀಲನಾ ಸಮಿತಿಯಿಂದ ಸರ್ಕಾರಕ್ಕೆ ಸಲ್ಲಿಕೆಯಾದ ರೂ. 1 ಕೋಟಿಗೂ ಮೇಲ್ಪಟ್ಟ ಎಲ್ಲಾ ರೀತಿಯ ಕಾಮಗಾರಿಗಳ ಟೆಂಡರ್‌ಗಳಿಗೆ (ತಾಂತ್ರಿಕ ಬಿಡ್ಡುಗಳು ಮತ್ತು ಆರ್ಥಿಕ ಬಿಡ್ಡುಗಳು) ಅನುಮೋದನೆಯನ್ನು ನೀಡುವ ಅಧಿಕಾರವನ್ನು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ರಾಜೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

**P.R. 343**

## ನಗರಾಭಿವೃದ್ಧಿ ಸಚಿವಾಲಯ

**ವಿಷಯ :** ಪೌರ ಸೇವೆಯ ಶ್ರೀ ಎಸ್. ರಾಜು, ಕಛೇರಿ ವ್ಯವಸ್ಥಾಪಕರು, ಇವರನ್ನು ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ವಿಲೀನಗೊಳಿಸುವ ಬಗ್ಗೆ–ಆದೇಶ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ನಅಇ 258 ಇಎಂಸಿ 94, ದಿನಾಂಕ : 9–12–1998.
2. ಸರ್ಕಾರದ ಆದೇಶ ಸಂಖ್ಯೆ : ನಅಇ 34 ಇಎಂಸಿ 2005, ಬೆಂಗಳೂರು, ದಿನಾಂಕ : 29–7–2005.
3. ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ : 1852 : ಡಿಎಂಎ 14 : ಎಫ್‌ಡಿಎ : 2014 ದಿನಾಂಕ : 21–02–2015.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರದ ಆದೇಶ ಸಂಖ್ಯೆ : ನಅಇ 258 ಇಎಂಸಿ 94, ದಿನಾಂಕ : 9–12–1998ರ ಕಾರ್ಯಕಾರಿ ಆದೇಶದ ಪ್ರಕಾರ ಐದು ವರ್ಷ ಸೇವೆ ಸಲ್ಲಿಸಿದ ಪುರಸಭಾ ಹಾಗೂ ಪೌರಾಡಳಿತ ನಿರ್ದೇಶನಾಲಯದ ವಿವಿಧ ವೃಂದದ ನೌಕರರನ್ನು ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದಕ್ಕೆ ಕಾರ್ಯಕಾರಿ ಆದೇಶದ ಮೂಲಕ ವಿಲೀನಗೊಳಿಸಲು ಅವಕಾಶ ಕಲ್ಪಿಸಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದನ್ವಯ ಪೌರ ಸೇವೆಯ ವಿವಿಧ ವೃಂದದ ನೌಕರರುಗಳನ್ನು ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ವಿಲೀನಗೊಳಿಸಲು, ಮತ್ತು ಸದರಿ ವೃಂದದ ನೇರ ನೇಮಕಾತಿ ಹುದ್ದೆಗಳನ್ನು ತುಂಬಲು ಅನುಪಾತವನ್ನು ನಿಗಧಿಪಡಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರನ್ವಯ ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಶ್ರೀ ಎಸ್. ರಾಜು, ಹಾಲಿ ಕಛೇರಿ ವ್ಯವಸ್ಥಾಪಕರು, ಪುರಸಭೆ ಚಿಕ್ಕನಾಯಕನಹಳ್ಳಿ ಇವರಿಗೆ ಕರ್ನಾಟಕ ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ : 17908–2006ರ ಪ್ರಕರಣದಲ್ಲಿ ಮಾನ್ಯ ನ್ಯಾಯಾಲಯವು ದಿನಾಂಕ : 10–6–2011ರಂದು ನೀಡಿರುವ ತೀರ್ಪಿನನ್ವಯ ದಿನಾಂಕ : 11–03–1994 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ವಿಲೀನಗೊಳಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಶ್ರೀ ಎಸ್. ನಾರಾಯಣರಾವ್ ಇವರಿಗೆ ಪ್ರಥಮ ದರ್ಜೆ ಸಹಾಯಕರಿಂದ ಕಛೇರಿ ವ್ಯವಸ್ಥಾಪಕ ಹುದ್ದೆಗೆ ಬಡ್ತಿ ನೀಡಿದ ದಿನಾಂಕದಿಂದಲೆ ಅಂದರೆ ದಿನಾಂಕ : 02–03–1980 ರಿಂದ ಪ್ರ.ದ.ಸ. ಹುದ್ದೆಯನ್ನು ಮತ್ತು ದಿನಾಂಕ : 26–06–1991 ರಿಂದ ಕಛೇರಿ ವ್ಯವಸ್ಥಾಪಕರ ಹುದ್ದೆಗೆ ಮತ್ತು ಕೆಎಂಎಎಸ್ ಶ್ರೇಣಿಯಲ್ಲಿ ಸೇರ್ಪಡೆ ಮಾಡಿರುವ ಸೌಲಭ್ಯಗಳನ್ನು ತಮಗೂ ಕೂಡ ವಿಸ್ತರಿಸುವಂತೆ ಪ್ರತಿವಾದಿಗಳಿಗೆ ನಿರ್ದೇಶನ ನೀಡುವಂತೆ ಕೋರಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ : 17908/2006ನ್ನು ಶ್ರೀ ಎಸ್. ರಾಜು ಇವರು ದಾಖಲಿಸಿರುತ್ತಾರೆ. ಸದರಿ ರಿಟ್ ಅರ್ಜಿಯನ್ನು ದಿನಾಂಕ : 10–06–2011 ರಂದು ಮಾನ್ಯ ನ್ಯಾಯಾಲಯವು ಇತ್ಯರ್ಥ ಪಡಿಸಿ, ತೀರ್ಪು ನೀಡಿ ಅರ್ಜಿದಾರರ ಕೋರಿಕೆಯನ್ನು ಪರಿಗಣಿಸುವಂತೆ ಹಾಗೂ ಇವರಿಗೆ ಪೂರ್ವಾನ್ವಯವಾಗಿ ಬಡ್ತಿ ನೀಡುವಂತೆ ಪ್ರತಿವಾದಿಗಳಿಗೆ (ಪ್ರತಿವಾದಿ–1 ಕಾರ್ಯದರ್ಶಿಗಳು, ನಗರಾಭಿವೃದ್ಧಿ ಇಲಾಖೆ, ಪ್ರತಿವಾದಿ–2 ಆಯುಕ್ತರು, ಪೌರಾಡಳಿತ ನಿರ್ದೇಶನಾಲಯ) ಇವರಿಗೆ ನಿರ್ದೇಶನ ನೀಡಿರುತ್ತದೆ. ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶದ ಉದ್ಧೃತ ಭಾಗ ಈ ಕೆಳಕಂಡಂತೆ ಇರುತ್ತದೆ.

"Hence, the answer is plain as stated by the counsel for the petitioner. Hence, a case is made out by the petitioner. Accordingly the writ petition is allowed. Annexure-H is quashed. The respondents are directed to accord retrospective promotion to the petitioner to the post of First Division Assistant, Office Manager, Chief Officer Grade-II from the date Narayana Rao was promoted with all notional benefits flowing therefrom. Ordered accordingly".

ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ : 17908/2006 ಮಾನ್ಯ ನ್ಯಾಯಾಲಯವು ದಿನಾಂಕ : 10–6–2011 ರಲ್ಲಿ ನೀಡಿರುವ ತೀರ್ಪಿನಂತೆ, ಈಗಾಗಲೇ ನ್ಯಾಯಾಲಯದ ಪೌರಾಡಳಿತ ನಿರ್ದೇಶನಾಲಯದ ಆದೇಶ ಸಂಖ್ಯೆ : ಪೌನಿ : ಸಿಬ್ಬಂದಿ : ಶಿಜಿ : ಸಿಆರ್ : 42 : 2002–03 : 1852/14, ದಿನಾಂಕ : 27–01–2015 ರನ್ವಯ ಶ್ರೀ ಎಸ್. ರಾಜು, ಪ್ರಥಮ ದರ್ಜೆ ಸಹಾಯಕ ಇವರಿಗೆ ಕಛೇರಿ ವ್ಯವಸ್ಥಾಪಕರ ಹುದ್ದೆಗೆ ದಿನಾಂಕ : 16–06–1991 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಮುಂಬಡ್ತಿ ನೀಡಿ ಆದೇಶ ಮಾಡಿರುತ್ತಾರೆ.

ಶ್ರೀ ಎಸ್. ನಾರಾಯಣರಾವ್ ಕಛೇರಿ ವ್ಯವಸ್ಥಾಪಕರು ಇವರಿಗೆ ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ದಿನಾಂಕ : 11–03–1994 ರಲ್ಲಿ ವಿಲೀನಗೊಳಿಸಿ ಆದೇಶಿಸಿರುವುದರಿಂದ ಆ ದಿನಾಂಕದಿಂದ ಜಾರಿಗೆ ಬರುವಂತೆ ನ್ಯಾಯಾಲಯದ ಆದೇಶದಂತೆ ಶ್ರೀ ಎಸ್. ರಾಜು ಇವರಿಗೂ ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ವಿಲೀನಗೊಳಿಸಿ ಆದೇಶಿಸಲು ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರು ಸರ್ಕಾರಕ್ಕೆ ಪ್ರಸ್ತಾವನೆಯಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶದ ಹಿನ್ನೆಲೆಯಲ್ಲಿ ಶ್ರೀ ಎಸ್. ರಾಜು, ಕಛೇರಿ ವ್ಯವಸ್ಥಾಪಕರು, ಪುರಸಭೆ ಚಿಕ್ಕನಾಯಕನಹಳ್ಳಿ ಇವರನ್ನು ಶ್ರೀ ಎಸ್. ನಾರಾಯಣರಾವ್ ಕಛೇರಿ ವ್ಯವಸ್ಥಾಪಕರು ಇವರಿಗೆ ಕೆಎಂಎಎಸ್ ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ದಿನಾಂಕ : 11–03–1994 ರನ್ವಯ ವಿಲೀನಗೊಳಿಸಿರುವ ದಿನಾಂಕದಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಬಡ್ತಿ ನೀಡಲು ಸಿ.ಆ.ಸು. ಇಲಾಖೆ ಮತ್ತು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ನಿರ್ದೇಶಕರು, ಪೌರಾಡಳಿತ ನಿರ್ದೇಶನಾಲಯ ಇವರು ಪಡೆದಿರುತ್ತಾರೆ.

ಶ್ರೀ ಎಸ್. ರಾಜು, ಕಛೇರಿ ವ್ಯವಸ್ಥಾಪಕರು, ಇವರಿಗೆ ವೇತನ ಸೌಲಭ್ಯಗಳ ಸಂರಕ್ಷಣೆಯೊಂದಿಗೆ, ಮತ್ತು ಹಾಲಿ ಇರುವ ವೇತನ ಶ್ರೇಣಿಯ ಸಂರಕ್ಷಣೆಯೊಂದಿಗೆ, ಎಲ್ಲಾ ಸೇವಾ ಸೌಲಭ್ಯಗಳನ್ನು ನೀಡಿ, ಕೆಎಂಎಎಸ್ ಅಧಿಕಾರಿಗೆ ಅನ್ವಯವಾಗುವ ಸೇವಾ ನಿಯಮಗಳಿಗೆ ಒಳಪಟ್ಟು ಮತ್ತು ಈ ಆದೇಶದಲ್ಲಿ ವಿಧಿಸಿರುವ ಷರತ್ತಿಗೊಳಪಟ್ಟು, ದಿನಾಂಕ : 11–03–1994 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ವಿಲೀನಗೊಳಿಸಲು ತೀರ್ಮಾನಿಸಲಾಗಿದೆ. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ನಅಇ 39 ಇಎಂಸಿ 2015, ಬೆಂಗಳೂರು, ದಿನಾಂಕ : 23–04–2015**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ಪೌರಸಭೆಗಳ ಅಧಿನಿಯಮ 1964ರ ಕಲಂ 365(1)(2)(ಎ) ಪ್ರಕಾರ ಪೌರ ಸೇವೆಯ ಶ್ರೀ ಎಸ್.ರಾಜು ಕಛೇರಿ ವ್ಯವಸ್ಥಾಪಕರು, ಪುರಸಭೆ ಚಿಕ್ಕನಾಯಕನಹಳ್ಳಿ ಇವರಿಗೆ ಹಾಲಿ ಪಡೆಯುತ್ತಿರುವ ವೇತನ ಶ್ರೇಣಿಯ ಸಂರಕ್ಷಣೆಯೊಂದಿಗೆ, ಎಲ್ಲಾ ಸೇವಾ ಸೌಲಭ್ಯಗಳನ್ನು ನೀಡಿ, ಕೆಎಂಎಎಸ್ ಅಧಿಕಾರಿಗೆ ಅನ್ವಯವಾಗುವ ಸೇವಾ ನಿಯಮಗಳಿಗೆ ಒಳಪಟ್ಟು ಮತ್ತು ಈ ಆದೇಶದಲ್ಲಿ ವಿಧಿಸಿರುವ ಷರತ್ತಿಗೊಳಪಟ್ಟು, ದಿನಾಂಕ : 11–03–1994 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕೆ.ಎಂ.ಎ.ಎಸ್. ಮುಖ್ಯಾಧಿಕಾರಿ ಶ್ರೇಣಿ–2 ವೃಂದದಲ್ಲಿ ವಿಲೀನಗೊಳಿಸಿ ಆದೇಶಿಸಿದೆ.

**ಷರತ್ತುಗಳು :**

ಶ್ರೀ ಎಸ್. ರಾಜು, ಕಛೇರಿ ವ್ಯವಸ್ಥಾಪಕರು, ಪುರಸಭೆ ಚಿಕ್ಕನಾಯಕನಹಳ್ಳಿ ಇವರು ಸರ್ಕಾರದ ಆದೇಶ ಸಂಖ್ಯೆ : ನಅಇ 58 ಇಎಂಸಿ 94, ದಿನಾಂಕ : 09-12-1998ರಲ್ಲಿ ತಿಳಿಸಿರುವಂತೆ ಮುಖ್ಯಾಧಿಕಾರಿ ಶ್ರೇಣಿ-2 ವೃಂದಕ್ಕೆ ನಿಗಧಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಎರಡು ವರ್ಷದೊಳಗೆ ಪಾಸುಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 344

**ಸಿದ್ದಿಕ್ ಪಾಷ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಉನ್ನತೀಕರಿಸಿರುವ ಆಪ್ತ ಕಾರ್ಯದರ್ಶಿ (ಆಯ್ಕೆ ಶ್ರೇಣಿ) ಹುದ್ದೆಗೆ ಕಾರ್ಯಕಾರಿ ಆದೇಶದ ಮೂಲಕ ನೇಮಕಾತಿ ವಿಧಾನವನ್ನು ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 230 ಸಉಸೇ 2015, ದಿನಾಂಕ : 09-04-2015.
2. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ : ಸಿಆಸುಇ 38 ಸೇನಿಇ 1996, ದಿನಾಂಕ : 01-08-1996.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಪ್ರಸ್ತುತ ಇರುವ ಹಿರಿಯ ಆಪ್ತ ಕಾರ್ಯದರ್ಶಿಗಳ ಹುದ್ದೆಗಳ ಪೈಕಿ ಮೂರು ಹುದ್ದೆಗಳನ್ನು "ಆಪ್ತ ಕಾರ್ಯದರ್ಶಿ (ಆಯ್ಕೆ ಶ್ರೇಣಿ)" ಹುದ್ದೆಯನ್ನಾಗಿ (ವೇತನ ಶ್ರೇಣಿ ರೂ. 52,500-73,000/-) ಉನ್ನತೀಕರಿಸಿ ಆದೇಶಿಸಲಾಗಿದೆ.

ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ಉನ್ನತೀಕರಿಸಲಾದ "ಆಪ್ತ ಕಾರ್ಯದರ್ಶಿ (ಆಯ್ಕೆ ಶ್ರೇಣಿ)" ಹುದ್ದೆಯನ್ನು ಸಚಿವಾಲಯ ವೃಂದ ಮತ್ತು ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡುವ ಮೂಲಕ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಅಳವಡಿಸಿ ತುಂಬಲು ಸಾಕಷ್ಟು ಕಾಲವಕಾಶ ಬೇಕಾಗುವುದರಿಂದ ಈ ಹುದ್ದೆಯನ್ನು ಕಾರ್ಯಕಾರಿ ಆದೇಶದ ಮೂಲಕ ನೇಮಕಾತಿ ವಿಧಾನವನ್ನು ನಿಗದಿಪಡಿಸಿ ತುಂಬಲು ಅವಕಾಶ ಕಲ್ಪಿಸಲು ಉದ್ದೇಶಿಸಲಾಗಿದೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯ ಸೇವೆಗಳು (ನೇಮಕಾತಿ) ನಿಯಮಗಳು, 1992 ಕ್ಕೆ ಸೂಕ್ತ ತಿದ್ದುಪಡಿ ತರುವುದನ್ನು ಕಾಯ್ದಿರಿಸಿ, ಮೇಲೆ ಕ್ರಮಸಂಖ್ಯೆ (2)ರಲ್ಲಿ ಓದಲಾದ ಅಧಿಕೃತ ಜ್ಞಾಪನದಲ್ಲಿನ ಮಾರ್ಗಸೂಚಿಗಳನ್ನು ಅಳವಡಿಸಿಕೊಂಡು ಕಾರ್ಯಕಾರಿ ಆದೇಶ ಹೊರಡಿಸುವ ಮೂಲಕ ಮೇಲ್ಕಂಡ ಹುದ್ದೆಗೆ ನೇಮಕಾತಿ ವಿಧಾನವನ್ನು ಜಾರಿಗೆ ತರಲು ಉದ್ದೇಶಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 230 ಸಉಸೇ 2014, ಬೆಂಗಳೂರು, ದಿನಾಂಕ : 04-06-2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 230 ಸಉಸೇ 2015, ದಿನಾಂಕ : 09-04-2015ರನ್ವಯ ಉನ್ನತೀಕರಿಸಿರುವ ಕರ್ನಾಟಕ ಸರ್ಕಾರದ ಸಚಿವಾಲಯದ "ಆಪ್ತ ಕಾರ್ಯದರ್ಶಿ (ಆಯ್ಕೆ ಶ್ರೇಣಿ)" (ವೇತನ ಶ್ರೇಣಿ ರೂ. 52,500-73,000) ಹುದ್ದೆಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಆದೇಶದ ಅನುಬಂಧದಲ್ಲಿ ನಮೂದಿಸಿರುವಂತೆ ನೇಮಕಾತಿ ಕಾರ್ಯ ವಿಧಾನವನ್ನು ನಿಗದಿಪಡಿಸಲಾಗಿದೆ.

1. ಈ ಕಾರ್ಯಕಾರಿ ಆದೇಶದ ಮೂಲಕ ನಿಗದಿಪಡಿಸಿದ ನೇಮಕಾತಿ ವಿಧಾನವು ಸದರಿ ಕಾರ್ಯಕಾರಿ ಆದೇಶವನ್ನು ಹೊರಡಿಸಿದ ದಿನಾಂಕದಿಂದ ಆರು ತಿಂಗಳ ಕಾಲ ಮಾತ್ರ ಜಾರಿಯಲ್ಲಿರುತ್ತದೆ.
2. ಆರು ತಿಂಗಳ ಒಳಗಾಗಿ ಈ ನೇಮಕಾತಿ ಕಾರ್ಯ ವಿಧಾನವನ್ನು ಕರ್ನಾಟಕ ಸರ್ಕಾರದ ಸಚಿವಾಲಯ ಸೇವೆಗಳು (ನೇಮಕಾತಿ) ನಿಯಮಗಳಿಗೆ ತಿದ್ದುಪಡಿ ಮಾಡಿ ಅಳವಡಿಸತಕ್ಕದ್ದು.
3. ಆರು ತಿಂಗಳ ನಂತರ ಈ ಕಾರ್ಯಕಾರಿ ಆದೇಶವು ತನ್ನಿಂದ ತಾನೇ ರದ್ದಾಗುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 977 ವೆಚ್ಚ 12/2014, ದಿನಾಂಕ : 05-03-2015 ಮತ್ತು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು) ವಿಭಾಗದ ಟಿಪ್ಪಣಿ ಸಂಖ್ಯೆ : ಸಿಆಸುಇ 74 ಸೇನಿಡಿ 2015, ದಿನಾಂಕ : 01-06-2015ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-6).

**ಅನುಬಂಧ**

| ಹುದ್ದೆಗಳ ಪದನಾಮ ಮತ್ತು ವೇತನ ಶ್ರೇಣಿ | ಹುದ್ದೆಗೆ ಸಂಖ್ಯೆ | ನೇಮಕಾತಿ ವಿಧಾನ | ಕನಿಷ್ಠ ಅರ್ಹತೆ |
|---|---|---|---|
| ಆಪ್ತ ಕಾರ್ಯದರ್ಶಿ (ಆಯ್ಕೆ ಶ್ರೇಣಿ) ವೇತನ ಶ್ರೇಣಿ (ರೂ. 52,500–73,000) | 03 | ಹಿರಿಯ ಆಪ್ತ ಕಾರ್ಯದರ್ಶಿ ವೃಂದದಿಂದ ಬಡ್ತಿ ಮೂಲಕ | ಹಿರಿಯ ಆಪ್ತ ಕಾರ್ಯದರ್ಶಿ ವೃಂದದಲ್ಲಿ ಕನಿಷ್ಠ 01 ವರ್ಷದ ಸೇವೆ ಸಲ್ಲಿಸಿರಬೇಕು. |

**ಚಂದ್ರಶೇಖರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–6).

**P.R. 349**

## ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಸಚಿವಾಲಯ

**ವಿಷಯ :** 2014–15ನೇ ಸಾಲಿನಲ್ಲಿ ಪರಿಸರ ಸಂರಕ್ಷಣೆ ಮತ್ತು ವ್ಯವಸ್ಥಾಪನಾ ಕ್ಷೇತ್ರಗಳಲ್ಲಿ ವಿಶಿಷ್ಟ ಸೇವೆ ಸಲ್ಲಿಸಿರುವ ವ್ಯಕ್ತಿ ಮತ್ತು ಸಂಸ್ಥೆಗಳನ್ನು ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಗೆ ಆಯ್ಕೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಅಪಜೀ 20 ಇಎನ್‌ಜಿ 2015, ದಿನಾಂಕ : 01–04–2015.
2. ದಿನಾಂಕ : 14–05–2015 ರಂದು ನಡೆದ ಆಯ್ಕೆ ಸಮಿತಿಯ ಪೂರ್ವಭಾವಿ ಸಭೆ.
3. ರಾಜ್ಯ ಪರಿಸರ ಪ್ರಶಸ್ತಿ ಆಯ್ಕೆ ಸಮಿತಿಯ ಸಭೆಯ ನಡವಳಿ ದಿನಾಂಕ : 27–05–2015.

**ಪ್ರಸ್ತಾವನೆ :**

ಪರಿಸರ ಸಂರಕ್ಷಣೆಗಾಗಿ ವ್ಯಕ್ತಿ ಮತ್ತು ಸಂಸ್ಥೆಗಳು ಸಲ್ಲಿಸಿರುವ ಸೇವೆಯನ್ನು ಗುರುತಿಸುವ ಸಲುವಾಗಿ 2014–15ನೇ ಸಾಲಿನಲ್ಲಿ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಯನ್ನು ನೀಡಲು ಸರ್ಕಾರವು ಉದ್ದೇಶಿಸಿದೆ. ಈ ಪ್ರಶಸ್ತಿ ತಲಾ ರೂ. 1.00 ಲಕ್ಷ (ರೂ. ಒಂದು ಲಕ್ಷ ಮಾತ್ರ) ನಗದು ಹಾಗೂ ಪ್ರಶಸ್ತಿ ಪತ್ರವನ್ನು ಒಳಗೊಂಡಿರುತ್ತದೆ. ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಯನ್ನು ವ್ಯಕ್ತಿ ಮತ್ತು ಸಂಸ್ಥೆಗಳಿಗೆ (ಸರ್ಕಾರಿ ವಲಯ, ಸರ್ಕಾರೇತರ ಸಂಸ್ಥೆ, ಕಂಪನಿ, ಟ್ರಸ್ಟುಗಳು ಇತರೆ) (1) ಪರಿಸರ ಸಂರಕ್ಷಣೆ ಮತ್ತು (2) ಪರಿಸರ ವ್ಯವಸ್ಥಾಪನೆ ಕ್ಷೇತ್ರಗಳಲ್ಲಿ ಕೊಡುಗೆ ಸಲ್ಲಿಸಿರುವ ಗಣನೀಯ ಸೇವೆಗಾಗಿ ನೀಡಲಾಗುವುದು. ಈ ರೀತಿ ವಿಶಿಷ್ಟ ಸೇವೆ ಸಲ್ಲಿಸಿರುವವರಿಂದ ಅರ್ಜಿ ಕೋರಿ ದಿನಾಂಕ : 11–04–2015ರಂದು ಪ್ರಜಾವಾಣಿ ಮತ್ತು ಟೈಮ್ಸ್ ಆಫ್ ಇಂಡಿಯಾ ಪತ್ರಿಕೆಗಳಲ್ಲಿ ಪತ್ರಿಕಾ ಪ್ರಕಟಣೆ ಹೊರಡಿಸಲಾಗಿದೆ. ಅಲ್ಲದೆ, ಈ ಪ್ರಕಟಣೆಯ ಪ್ರತಿಯನ್ನು ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಕಛೇರಿ, ಜಿಲ್ಲಾ ಪಂಚಾಯತ್, ಮುಖ್ಯ ಕಾರ್ಯನಿರ್ವಾಹಣಾ ಅಧಿಕಾರಿಗಳ ಕಛೇರಿ, ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ, ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನಾ ಸಂಸ್ಥೆ, ಕೆರೆ ಅಭಿವೃದ್ಧಿ ಪ್ರಾಧಿಕಾರ, ಕರ್ನಾಟಕ ಜೀವವೈವಿಧ್ಯ ಮಂಡಳಿ, ಇಲಾಖೆಯ ಎಲ್ಲಾ ಪ್ರಾದೇಶಿಕ ನಿರ್ದೇಶಕರ ಕಛೇರಿಗಳು ಮತ್ತು ಇಲಾಖಾ ವೆಬ್‌ಸೈಟ್‌ಗಳಲ್ಲೂ ಪ್ರಕಟಿಸಲಾಗಿತ್ತು. ಈ ಪತ್ರಿಕಾ ಪ್ರಕಟಣೆಯನುಸಾರ ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ : 12–05–2015ಕ್ಕೆ ನಿಗದಿಪಡಿಸಲಾಗಿತ್ತು. ದಿನಾಂಕ : 14–05–2015 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಆಯ್ಕೆ ಸಮಿತಿ ಪೂರ್ವಭಾವಿ ಸಭೆ ನಡೆಸಿ ಸದರಿ ಸಭೆಯಲ್ಲಿ ಸ್ವೀಕೃತಗೊಂಡಿರುವ ಅರ್ಜಿಗಳ ಸ್ಥಳ ಪರಿಶೀಲನೆ ನಡೆಸಿ ವರದಿ ಸಲ್ಲಿಸಲು ಅಧಿಕಾರಿಗಳನ್ನು ನಿಯೋಜಿಸಲು ತೀರ್ಮಾನಿಸಲಾಯಿತು. ಪ್ರಕಟಣೆಯ ರೀತ್ಯಾ ರಾಜ್ಯದ ಮೂರು ವಲಯಗಳಲ್ಲಿನ ತಲಾ ಒಬ್ಬ ವ್ಯಕ್ತಿ ಮತ್ತು ಒಂದು ಸಂಸ್ಥೆಯನ್ನು ಪ್ರಶಸ್ತಿಗೆ ಪರಿಗಣಿಸಲು ಉದ್ದೇಶಿಸಲಾಗಿದ್ದು, ಈ ಪ್ರತಿ ವಲಯದ ವ್ಯಾಪ್ತಿಯಲ್ಲಿ ಬರುವ ಜಿಲ್ಲೆಗಳನ್ನು ಕೆಳಕಂಡಂತೆ ವಿಂಗಡಿಸಲಾಗಿತ್ತು.

(i) **ದಕ್ಷಿಣ ವಲಯ :** ಮಂಡ್ಯ, ರಾಮನಗರ, ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ಚಿಕ್ಕಬಳ್ಳಾಪುರ ಮತ್ತು ತುಮಕೂರು ಜಿಲ್ಲೆಗಳು.

(ii) **ಮಲೆನಾಡು ಮತ್ತು ಕರಾವಳಿ ವಲಯ :** ಬೆಳಗಾವಿ, ಶಿವಮೊಗ್ಗ, ಚಿಕ್ಕಮಗಳೂರು, ಮೈಸೂರು, ಕೊಡಗು, ಚಾಮರಾಜನಗರ, ಹಾಸನ, ದಕ್ಷಿಣ ಕನ್ನಡ, ಉತ್ತರ ಕನ್ನಡ ಮತ್ತು ಉಡುಪಿ ಜಿಲ್ಲೆಗಳು.

(iii) **ಉತ್ತರ ವಲಯ :** ದಾವಣಗೆರೆ, ಚಿತ್ರದುರ್ಗ, ಹಾವೇರಿ, ಧಾರವಾಡ, ಗದಗ್, ಬಳ್ಳಾರಿ, ಬಾಗಲಕೋಟೆ, ವಿಜಯಪುರ, ಬೀದರ್, ಕಲಬುರಗಿ, ಯಾದಗಿರಿ, ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳು.

ಮೇಲ್ಕಂಡ ಪ್ರಕಟಣೆಯನುಸಾರ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಗೆ ಆಯ್ಕೆ ಕೋರಿ ಒಟ್ಟು 79 ಅರ್ಜಿಗಳು ಸ್ವೀಕೃತವಾಗಿದ್ದು, ಇದರಲ್ಲಿ ದಕ್ಷಿಣ ವಲಯ ವ್ಯಕ್ತಿ ವಿಭಾಗದಿಂದ 23, ಸಂಸ್ಥೆ ವಿಭಾಗದಿಂದ 5 ಮತ್ತು ಮಲೆನಾಡು/ಕರಾವಳಿ ವಲಯದ ವ್ಯಕ್ತಿ ವಿಭಾಗದಿಂದ 19, ಸಂಸ್ಥೆ ವಿಭಾಗದಿಂದ 7 ಹಾಗೂ ಉತ್ತರ ವಲಯದ ವ್ಯಕ್ತಿ ವಿಭಾಗದಿಂದ 18, ಸಂಸ್ಥೆ ವಿಭಾಗದಿಂದ 7 ಅರ್ಜಿಗಳು ಸ್ವೀಕೃತವಾಗಿರುತ್ತವೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ : 14–05–2015 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಪ್ರಶಸ್ತಿಗೆ ಆಯ್ಕೆ ಕೋರಿ ಅರ್ಜಿ ಸಲ್ಲಿಸಿರುವ ವ್ಯಕ್ತಿ ಮತ್ತು ಸಂಸ್ಥೆಗಳನ್ನು ಖುದ್ದಾಗಿ ಸಂಪರ್ಕಿಸಿ ಅವರ ಕಾರ್ಯವನ್ನು ಪರಿವೀಕ್ಷಣೆ ನಡೆಸಿ ಆಯ್ಕೆ ಸಮಿತಿ ಮುಂದೆ ವರದಿಯನ್ನು ಪ್ರಸ್ತುತಪಡಿಸಲು ಅಧಿಕಾರಿಗಳ ತಂಡವನ್ನು ರಚಿಸಲಾಗಿತ್ತು. ಅದರಂತೆ, ಈ ಅಧಿಕಾರಿಗಳ ತಂಡವು ದಿನಾಂಕ : 27–05–2015ರಂದು ನಡೆದ ಆಯ್ಕೆ ಸಮಿತಿ ಸಭೆ ಮುಂದೆ ತಮ್ಮ ವರದಿಯನ್ನು ಸಲ್ಲಿಸಿರುತ್ತಾರೆ. ಸ್ವೀಕೃತಗೊಂಡ ಅರ್ಜಿಗಳನ್ನು ಮತ್ತು ಪರಿವೀಕ್ಷಣಾ ವರದಿಯನ್ನು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದ ಮೂಲಕ ರಚಿತವಾಗಿದ್ದ ಆಯ್ಕೆ ಸಮಿತಿಯ ಮುಂದೆ ಮಂಡಿಸಲಾಗಿತ್ತು. ಸದರಿ ಸಮಿತಿಯು ಅರ್ಜಿಯ ವಿವರಗಳನ್ನು ಹಾಗೂ ಪರಿವೀಕ್ಷಣಾ ವರದಿಯನ್ನು ಪರಿಶೀಲಿಸಿ ಒಮ್ಮತದಿಂದ ಸರ್ಕಾರಕ್ಕೆ ಈ ಕೆಳಕಂಡ ವ್ಯಕ್ತಿ/ಸಂಸ್ಥೆಗಳನ್ನು ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿಗೆ ಶಿಫಾರಸ್ಸು ಮಾಡಿರುತ್ತದೆ.

**ಅ) ದಕ್ಷಿಣ ವಲಯ :–**

(i) **ವ್ಯಕ್ತಿ :–** ಶ್ರೀ ಸಿ. ಲಕ್ಷ್ಮಣ್, ಮಕ್ಕಳ ಮನೆ, # 35, 2ನೇ ಮುಖ್ಯ ರಸ್ತೆ, ಬನಶಂಕರಿ 5ನೇ ಹಂತ, ಉತ್ತರಹಳ್ಳಿ, ಬೆಂಗಳೂರು–560061.

(ii) **ಸಂಸ್ಥೆ :–** ಸಾಲಿಡ್ ವೇಸ್ಟ್ ಮ್ಯಾನೇಜ್‌ಮೆಂಟ್ ರೌಂಡ್ ಟೇಬಲ್, (SWMRT) ಡಬ್ಲ್ಯೂ–202, ಸನ್‌ರೈಸ್ ಚೇಂಬರ್, ನಂ. 22, ಹಲಸೂರು ರಸ್ತೆ, ಬೆಂಗಳೂರು–560042.

ಆ) **ಮಲೆನಾಡು ಮತ್ತು ಕರಾವಳಿ ವಲಯ :–**

(i) **ವ್ಯಕ್ತಿ :–** ಡಾ: ಎಸ್. ಹರೀಶ್ ಜೋಶಿ, ನಂ. 701, ಅಭಿಮಾನ್ ಮ್ಯಾನ್‌ಷನ್, ಬಿಜೈ ಚರ್ಚ್ ರೋಡ್, ಮಂಗಳೂರು–575004.

(ii) **ಸಂಸ್ಥೆ :–** ಇಕೋ ಡೆವಲೆಪ್‌ಮೆಂಟ್ ಕಮಿಟಿ, ಅವುರಾಲಿ, ಫಾಂಸೋಲಿ ವನ್ಯ ಜೀವಿ ವಲಯ, ದಾಂಡೇಲಿ, ಬೆಳಗಾವಿ ಜಿಲ್ಲೆ.

ಇ) **ಉತ್ತರ ವಲಯ :–**

(i) **ವ್ಯಕ್ತಿ :–** ಡಾ: ಆರ್. ಪರಿಮಳ, 'ಪ್ರಭಂಜನ', ಶಂಕರ ಮಠದ ಹಿಂದೆ, ವೈ.ಎಸ್. ಕಾಲೋನಿ, 2ನೇ ಅಡ್ಡ ರಸ್ತೆ, ಧಾರವಾಡ–580004.

(ii) **ಸಂಸ್ಥೆ :–** ಬಂಟನೂರ ಗ್ರಾಮ ಅರಣ್ಯ ಸಮಿತಿ, ಮುಧೋಳ ವಲಯ, ಬಾಗಲಕೋಟೆ ವಿಭಾಗ, ಬಾಗಲಕೋಟೆ ಜಿಲ್ಲೆ.

ರಾಜ್ಯ ಪರಿಸರ ಪ್ರಶಸ್ತಿ ಆಯ್ಕೆ ಸಮಿತಿಯ ಶಿಫಾರಸ್ಸುಗಳನ್ನು ಪರಿಗಣಿಸಿ, ಸರ್ಕಾರದ ಅನುಮೋದನೆಯೊಂದಿಗೆ "**2014–15ನೇ ಸಾಲಿನ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿ**"**ಗೆ** ಅರ್ಹ ಪುರಸ್ಕೃತ ವ್ಯಕ್ತಿ ಮತ್ತು ಸಂಸ್ಥೆಗಳನ್ನು ಅಂತಿಮವಾಗಿ ತೀರ್ಮಾನಿಸಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಅಪಜೀ 20 ಇಎನ್‌ಜಿ 2015, ಬೆಂಗಳೂರು, ದಿನಾಂಕ : 03–06–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿ ಆಯ್ಕೆ ಸಮಿತಿಯ ಶಿಫಾರಸ್ಸಿನಂತೆ, ಪರಿಸರ ಸಂರಕ್ಷಣೆ ಮತ್ತು ವ್ಯವಸ್ಥಾಪನಾ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿರುವ ಈ ಕೆಳಕಂಡ ವ್ಯಕ್ತಿ ಮತ್ತು ಸಂಸ್ಥೆಗಳನ್ನು 2014–15ನೇ ಸಾಲಿನ "**ಕರ್ನಾಟಕ ರಾಜ್ಯ ಪರಿಸರ ಪ್ರಶಸ್ತಿ**"**ಗೆ** ಆಯ್ಕೆ ಮಾಡಲಾಗಿದೆ. ಸದರಿ ಪ್ರಶಸ್ತಿಯು ತಲಾ ರೂ. 1.00 ಲಕ್ಷ (ರೂ. ಒಂದು ಲಕ್ಷ ಮಾತ್ರ) ನಗದು ಮತ್ತು ಪ್ರಶಸ್ತಿ ಪತ್ರವನ್ನು ಒಳಗೊಂಡಿರುತ್ತದೆ.

**ವ್ಯಕ್ತಿಗಳ ವಿಭಾಗ :–**

1. ಶ್ರೀ ಸಿ. ಲಕ್ಷ್ಮಣ್,
   ಮಕ್ಕಳ ಮನೆ # 35, 2ನೇ ಮುಖ್ಯ ರಸ್ತೆ, ಬನಶಂಕರಿ 5ನೇ ಹಂತ, ಉತ್ತರ ಹಳ್ಳಿ, ಬೆಂಗಳೂರು–560061.
2. ಡಾ: ಎಸ್. ಹರೀಶ್ ಜೋಶಿ,
   ನಂ. 701, ಅಭಿಮಾನ್ ಮ್ಯಾನ್‌ಷನ್, ಬಿಜೈ ಚರ್ಚ್ ರೋಡ್, ಮಂಗಳೂರು–575004.
3. ಡಾ: ಆರ್. ಪರಿಮಳ,
   'ಪ್ರಭಂಜನ', ಶಂಕರ ಮಠದ ಹಿಂದೆ, ವೈ.ಎಸ್. ಕಾಲೋನಿ, 2ನೇ ಅಡ್ಡ ರಸ್ತೆ, ಧಾರವಾಡ–580004.

**ಸಂಸ್ಥೆಗಳ ವಿಭಾಗ :–**

1. ಸಾಲಿಡ್ ವೇಸ್ಟ್ ಮ್ಯಾನೇಜ್‌ಮೆಂಟ್ ರೌಂಡ್ ಟೇಬಲ್,
   (SWMRT) ಡಬ್ಲ್ಯೂ–202, ಸನ್‌ರೈಸ್ ಚೇಂಬರ್, ನಂ. 22, ಹಲಸೂರು ರಸ್ತೆ, ಬೆಂಗಳೂರು–560042.
2. ಇಕೋ ಡೆವಲೆಪ್‌ಮೆಂಟ್ ಕಮಿಟಿ, ಅವುರಾಲಿ, ಫಾಂಸೋಲಿ ವನ್ಯ ಜೀವಿ ವಲಯ, ದಾಂಡೇಲಿ, ಬೆಳಗಾವಿ ಜಿಲ್ಲೆ.
3. ಬಂಟನೂರ ಗ್ರಾಮ ಅರಣ್ಯ ಸಮಿತಿ, ಮುಧೋಳ ವಲಯ, ಬಾಗಲಕೋಟೆ ವಿಭಾಗ, ಬಾಗಲಕೋಟೆ ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 354**

**SC-30**

**ರಾಮಚಂದ್ರ**

ಸರ್ಕಾರದ ಕಾರ್ಯದರ್ಶಿ,

(ಪರಿಸರ ಮತ್ತು ಜೀವಿಶಾಸ್ತ್ರ)

ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ :** ಮಣಿಪಾಲ ಮಾಹೆ ಸಂಸ್ಥೆಯವರಿಗೆ ಸರ್ಕಾರಿ ಭೂಮಿಯನ್ನು ಮಂಜೂರು ಮಾಡಿದ ನಂತರ ಮಂಜೂರಾತಿ ಷರತ್ತು ಉಲ್ಲಂಘಿಸಿ ನಿಯಮಬಾಹಿರವಾಗಿ ಕಟ್ಟಡ ಕಟ್ಟಿರುವ ಕುರಿತು.

**ಓದಲಾಗಿದೆ :** ಜಿಲ್ಲಾಧಿಕಾರಿ, ಉಡುಪಿ ಜಿಲ್ಲೆ, ಉಡುಪಿ ಇವರ ಪತ್ರ ಸಂ. ಎಲ್‌ಎನ್‌ಡಿ. ಸಿಆರ್ : 84/2015–16/82308, ದಿನಾಂಕ : 14–05–2015.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ, ಜಿಲ್ಲಾಧಿಕಾರಿ, ಉಡುಪಿ ಜಿಲ್ಲೆ, ಉಡುಪಿ ರವರು ಉಡುಪಿ ತಾಲ್ಲೂಕಿನ ಶಿವಳ್ಳಿ, ಹೆರ್ಗ ಹಾಗೂ 80 ಬಡಗಬೆಟ್ಟು ಗ್ರಾಮಗಳ ವ್ಯಾಪ್ತಿಯಲ್ಲಿ ಅಕಾಡಮಿ ಆಫ್ ಜನರಲ್ ಎಜುಕೇಶನ್, ಮಣಿಪಾಲ ಮತ್ತು ಮಣಿಪಾಲ ಅಕಾಡಮಿ ಆಫ್ ಹೈಯರ್ ಎಜುಕೇಶನ್ ಸಂಸ್ಥೆಗೆ ವಿವಿಧ ಸರ್ವೆ ನಂಬರ್‌ಗಳಲ್ಲಿ ಒಟ್ಟು 266.27 ಎಕರೆ ವಿಸ್ತೀರ್ಣದ ಜಮೀನುಗಳನ್ನು ಕ್ರಮವಾಗಿ ದಿನಾಂಕ : 31–10–1953 ಮತ್ತು 15–02–1958ರ ಸರ್ಕಾರಿ

ಆದೇಶಗಳಲ್ಲಿ ವಿವಿಧ ಉದ್ದೇಶಗಳಿಗೆ ಅಂದರೆ ಶೈಕ್ಷಣಿಕ ಕಟ್ಟಡ, ಉಪನ್ಯಾಸಕರ ವಸತಿ ಗೃಹ, ಸಿಬ್ಬಂದಿ ವಸತಿ ಗೃಹ, ಹೂದೋಟ, ಆಟದ ಮೈದಾನ, ಇಂಜಿನಿಯರಿಂಗ್ ಕಾಲೇಜು ಕಟ್ಟಡ ಮತ್ತು ವರ್ಕ್‌ಶಾಪ್ ಇತ್ಯಾದಿಗಳಿಗೆ ಮಂಜೂರು ಮಾಡಲಾಗಿದೆ. ಆ ಪೈಕಿ ದಿನಾಂಕ : 10–12–1965ರಲ್ಲಿ ಕೆಲವು ವಿಸ್ತೀರ್ಣದ ಜಮೀನುಗಳಿಗೆ ಸಂಬಂಧಿಸಿದಂತೆ ಮಂಜೂರಾದ ಜಮೀನಿನ ಉದ್ದೇಶವನ್ನು ಅಂದರೆ ಆಟದ ಮೈದಾನ, ಶೈಕ್ಷಣಿಕ ಕಟ್ಟಡ, ಉಪನ್ಯಾಸಕರ ಮತ್ತು ಸಿಬ್ಬಂದಿ ವಸತಿ ಗೃಹ ಮತ್ತು ಹೂದೋಟಕ್ಕೆ ಬದಲಾಗಿ ಸಿಬ್ಬಂದಿ ವಸತಿ ಗೃಹ, ಆಸ್ಪತ್ರೆ ಕಟ್ಟಡ ಮತ್ತು ವಿದ್ಯಾರ್ಥಿ ನಿಲಯಕ್ಕೆ ಪರಿವರ್ತಿಸಲು ಜಿಲ್ಲಾಧಿಕಾರಿರವರಿಂದ ಅನುಮತಿಯನ್ನು ಪಡೆದಿರುತ್ತಾರೆ.

ಈ ಹಿಂದೆ ಸದರಿ ಸಂಸ್ಥೆಗೆ ಮಂಜೂರಾಗಿದ್ದ ಕೆಲವು ಜಮೀನುಗಳ ಕುರಿತು ಮಂಜೂರಾತಿ ಷರತ್ತುಗಳು ಉಲ್ಲಂಘನೆಯಾಗಿದ್ದರಿಂದ ಸರ್ಕಾರದ ಆದೇಶ ಸಂಖ್ಯೆ : ಕಂಇ 212 ಎಲ್‌ಜಿಎ 1993 ದಿನಾಂಕ : 06–10–2000ರಂತೆ ಮಂಜೂರಾತಿ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲು ಆದೇಶವಾಗಿತ್ತು. ಸದರಿ ಆದೇಶವನ್ನು ಪ್ರಶ್ನಿಸಿ ಸಂಸ್ಥೆಯವರು ಮಾನ್ಯ ಉಚ್ಛ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ : 34051/2000ನ್ನು ದಾಖಲಿಸಿತ್ತು. ಈ ರಿಟ್ ಅರ್ಜಿಯಲ್ಲಿ ಮಾನ್ಯ ನ್ಯಾಯಾಲಯ ದಿನಾಂಕ : 04–09–2001ರಂದು ತೀರ್ಪನ್ನು ನೀಡಿದ್ದು, ಶೈಕ್ಷಣಿಕ ಉದ್ದೇಶಕ್ಕಾಗಿ ಜಮೀನನ್ನು ಪಡೆದು ಅದರಂತೆ ಅನುಷ್ಠಾನಗೊಳಿಸುವ ಸಂದರ್ಭದಲ್ಲಿ ಕೆಲವು ಅವಶ್ಯಕತೆಗನುಗುಣವಾಗಿ ಬದಲಾವಣೆಗಳನ್ನು ಅಂದರೆ ಶೈಕ್ಷಣಿಕ ಉದ್ದೇಶಕ್ಕಾಗಿಯೇ ಚಟುವಟಿಕೆಗಳನ್ನು ಪುನರ್ ವ್ಯವಸ್ಥೆ (Re arranged) ಮಾಡಿಕೊಂಡಿದ್ದಾರೆಂದು ಹಾಗೂ ಉದ್ದೇಶ ಉಲ್ಲಂಘನೆಯಾಗಿಲ್ಲವೆಂದು ನ್ಯಾಯಾಲಯವು ತೀರ್ಪು ನೀಡಿದೆ. ಇದಲ್ಲದೆ ಇನ್ನೊಂದು ರಿಟ್ ಅರ್ಜಿ ಸಂಖ್ಯೆ : 34216/2000ನ್ನು ಸಹ ಸದರಿ ಸಂಸ್ಥೆಯು ಮಾನ್ಯ ಉಚ್ಛ ನ್ಯಾಯಾಲಯದಲ್ಲಿ ದಾಖಲಿಸಿದ್ದು, ಮೇಲೆ ತಿಳಿಸಿದ ರಿಟ್ ಅರ್ಜಿ ಸಂಖ್ಯೆ : 34051/2000ರಲ್ಲಿನ ದಿನಾಂಕ : 04–09–2001ರ ತೀರ್ಪಿನನ್ವಯ ಮಾನ್ಯ ನ್ಯಾಯಾಲಯವು ದಿನಾಂಕ : 06–09–2001ರಂದು ವಿಲೇ ಮಾಡಿದೆ. ರಾಜ್ಯ ಸರ್ಕಾರವು ಮಾನ್ಯ ಉಚ್ಛ ನ್ಯಾಯಾಲಯದ ವಿಭಾಗೀಯ ಪೀಠದ ಮುಂದೆ ಈ ಆದೇಶದ ವಿರುದ್ಧ ಸಲ್ಲಿಸಲಾಗಿದ್ದ ರಿಟ್ ಮೇಲ್ಮನವಿ ಸಂಖ್ಯೆ : 7778/2001, ದಿನಾಂಕ : 13–11–2002ರಂದು ವಿಲೇ ಆಗಿದ್ದು, ಮಾನ್ಯ ಏಕಪೀಠ ನ್ಯಾಯಾಧೀಶರ ತೀರ್ಪನ್ನು ಎತ್ತಿಹಿಡಿದು ರಿಟ್ ಅಪೀಲನ್ನು ವಜಾ ಮಾಡಿರುತ್ತದೆ. ತದನಂತರ ಮಾನ್ಯ ಸರ್ವೋಚ್ಛ ನ್ಯಾಯಾಲಯದಲ್ಲಿ ಸಹ ರಾಜ್ಯ ಸರ್ಕಾರವು ಎಸ್.ಎಲ್.ಪಿ. ಸಂಖ್ಯೆ : ಸಿಸಿ 7034/2003ನ್ನು ಸಲ್ಲಿಸಿದ್ದು, ಮಾನ್ಯ ಸರ್ವೋಚ್ಛ ನ್ಯಾಯಾಲಯವು ದಿನಾಂಕ : 22–08–2003ರಂದು ಸದರಿ ಎಸ್.ಎಲ್.ಪಿಯನ್ನು ವಜಾ ಮಾಡಿದೆ.

ಜಿಲ್ಲಾಧಿಕಾರಿರವರ ವರದಿಯನ್ವಯ ಮಾಹೆ ಮಣಿಪಾಲ ಸಂಸ್ಥೆಗೆ ಒಟ್ಟು 266.27 ಎಕರೆ ಜಮೀನು ಮಂಜೂರಾಗಿದ್ದು, ಆ ಪೈಕಿ ನ್ಯಾಯಾಲಯದ ರಿಟ್ ಅರ್ಜಿಗಳಲ್ಲಿ ಒಳಗೊಂಡ ವಿಸ್ತೀರ್ಣ 102.97 ಎಕರೆಯನ್ನು ಹೊರತುಪಡಿಸಿ, ಒಟ್ಟು 109.38 ಎಕರೆ ವಿಸ್ತೀರ್ಣದಲ್ಲಿ ಮಂಜೂರಾತಿ ಷರತ್ತು ಉಲ್ಲಂಘನೆಯಾಗಿದೆಯೆಂದು ತಿಳಿಸಿದ್ದಾರೆ. ಮಂಜೂರಾದ ಜಮೀನಿನ ಪೈಕಿ ಷರತ್ತುಗಳನ್ನು ಪೂರೈಸಿದ ವಿಸ್ತೀರ್ಣ 53.92 ಎಕರೆಯಾಗಿದೆ. ಭಾಗಶಃ ಷರತ್ತು ಉಲ್ಲಂಘನೆ ಹಾಗೂ ಪೂರ್ತಿ ಷರತ್ತು ಉಲ್ಲಂಘನೆಯಾಗಿರುವ ವಿಸ್ತೀರ್ಣ ಕ್ರಮವಾಗಿ 85.10 ಎಕರೆ ಮತ್ತು 24.28 ಎಕರೆಗಳಾಗಿರುತ್ತದೆ. ಸದರಿ ಸಂಸ್ಥೆಗೆ ಈ ಹಿಂದೆ ಸರ್ಕಾರದಿಂದ ಶೈಕ್ಷಣಿಕ ಚಟುವಟಿಕೆಗಳಿಗಾಗಿ ಸರ್ಕಾರಿ ಜಮೀನನ್ನು ಮಂಜೂರು ಮಾಡಿದ್ದು, ಮಂಜೂರಾತಿ ಜಮೀನುಗಳನ್ನು ನಿಗದಿಪಡಿಸಿದ ಉದ್ದೇಶಕ್ಕೆ ಬಳಸಿಕೊಳ್ಳದೆ ಹಲವಾರು ಪ್ರಕರಣಗಳಲ್ಲಿ ಉದ್ದೇಶ ಬದಲಾವಣೆ ಮಾಡಿಕೊಂಡಿರುವುದು ಹಾಗೂ ಸದರಿ ಉದ್ದೇಶ ಬದಲಾವಣೆ ಪೂರ್ವದಲ್ಲಿ ಸರ್ಕಾರದ ಅನುಮೋದನೆ ಪಡೆದುಕೊಂಡಿರುವುದಿಲ್ಲವೆಂದು ಜಿಲ್ಲಾಧಿಕಾರಿರವರು ವರದಿ ಮಾಡಿರುತ್ತಾರೆ. ಮೇಲೆ ವಿವರಿಸಿದಂತೆ ಮಂಜೂರಾತಿ ಷರತ್ತು ಉಲ್ಲಂಘಿಸಿದ ಕಾರಣಕ್ಕಾಗಿ ಸರ್ಕಾರದಿಂದ ವ್ಯತಿರಿಕ್ತ ಆದೇಶ ಮಾಡಿದ ನಂತರವೂ ಅರ್ಜಿದಾರರು ಪುನಃ ಇದೇ ರೀತಿಯ ಷರತ್ತು ಉಲ್ಲಂಘಿಸಿದ್ದಾರೆಂದು ಜಿಲ್ಲಾಧಿಕಾರಿರವರು ಸರ್ಕಾರಕ್ಕೆ ವರದಿ ಮಾಡುತ್ತಾ, ಈ ಕೆಳಕಂಡ ಎರಡು ಅಂಶಗಳ ಕುರಿತು ಸರ್ಕಾರವು ಸೂಕ್ತ ನಿರ್ಧಾರವನ್ನು ತೆಗೆದುಕೊಳ್ಳಬಹುದೆಂದು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

1) ಮಾನ್ಯ ಉಚ್ಛ ನ್ಯಾಯಾಲಯದ ಆದೇಶದಲ್ಲಿ ಒಳಗೊಂಡ ಒಟ್ಟು ವಿಸ್ತೀರ್ಣ 102.97 ಎಕರೆಯನ್ನು ಹೊರತುಪಡಿಸಿ ಉಳಿದ ವಿಸ್ತೀರ್ಣ ಒಟ್ಟು 109.38 ಎಕರೆಗೆ ಮಂಜೂರಾತಿ ಷರತ್ತು ಉಲ್ಲಂಘನೆಯಾಗಿರುವುದರಿಂದ ಈ ಜಮೀನುಗಳಿಗೆ ಮಾತ್ರ ಸಂಬಂಧಿಸಿದಂತೆ ಈ ಮಂಜೂರಾತಿ ಜಮೀನುಗಳನ್ನು ಸರ್ಕಾರದ ವಶಕ್ಕೆ ಹಿಂಪಡೆಯುವ ಬಗ್ಗೆ ನಿಯಮಾನುಸಾರ ನೋಟೀಸ್ ಜಾರಿ ಮಾಡಿ ನಂತರ ಕಾನೂನು ರೀತ್ಯ ಪ್ರಕರಣವನ್ನು ಇತ್ಯರ್ಥಪಡಿಸಬಹುದು.

ಅಥವಾ

2) ಈ ಹಿಂದೆ ಮಾನ್ಯ ಉಚ್ಛ ನ್ಯಾಯಾಲಯದಲ್ಲಿ ಅರ್ಜಿದಾರ ಸಂಸ್ಥೆಯವರ ಸಲ್ಲಿಸಿರುವ ರಿಟ್ ಅರ್ಜಿಯನ್ನು ಪುರಸ್ಕರಿಸಿದ ಹಿನ್ನೆಲೆಯಲ್ಲಿ ಮತ್ತು ಶೈಕ್ಷಣಿಕ ದೃಷ್ಟಿಕೋನದಿಂದ ಪರಿಗಣಿಸುವುದಾದಲ್ಲಿ ಮಂಜೂರಾತಿ ಷರತ್ತು ಉಲ್ಲಂಘನೆಯಾಗಿರುವ ಜಮೀನುಗಳಿಗೆ ಸಂಬಂಧಿಸಿದಂತೆ ಸದರಿ ಸಂಸ್ಥೆಯವರಿಂದ ಪ್ರಚಲಿತ ಮಾರ್ಗಸೂಚಿಯ ಬೆಲೆಯ ಮೂರು ಪಟ್ಟು ದಂಡವನ್ನು ವಸೂಲು ಮಾಡಿ ಉದ್ದೇಶ ಬದಲಾವಣೆಗೆ ಘಟನೋತ್ತರ ಅನುಮತಿ ನೀಡಬಹುದು. ಈ ರೀತಿ ಮಾಡಿದಲ್ಲಿ ದಂಡದ ಮೊತ್ತ ಒಟ್ಟು ರೂ. 1,12,363.00 ಲಕ್ಷಗಳಾಗುತ್ತವೆ. (ರೂಪಾಯಿ ಒಂದು ಲಕ್ಷದ ಹನ್ನೆರಡು ಸಾವಿರದ ಮುನ್ನೂರ ಅರವತ್ತ ಮೂರು ಲಕ್ಷಗಳು ಮಾತ್ರ) ಎಂದು ತಿಳಿಸಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 30 ಎಲ್‌ಜಿಎ 2015, ದಿನಾಂಕ : 05–06–2015.**

ಉಡುಪಿ ಜಿಲ್ಲೆಯ ಉಡುಪಿ ತಾಲ್ಲೂಕಿನ ಶಿವಳ್ಳಿ, ಹೇರ್ಗ ಹಾಗೂ 80 ಬಡಗಬೆಟ್ಟು ಗ್ರಾಮಗಳ ವ್ಯಾಪ್ತಿಯಲ್ಲಿ ಅಕಾಡಮಿ ಆಫ್ ಜನರಲ್ ಎಜುಕೇಶನ್, ಮಣಿಪಾಲ ಮತ್ತು ಮಣಿಪಾಲ ಅಕಾಡಮಿ ಆಫ್ ಹೈಯರ್ ಎಜುಕೇಶನ್ ಸಂಸ್ಥೆಗೆ ವಿವಿಧ ಸರ್ವೆ ನಂಬರ್‌ಗಳಲ್ಲಿ ಮಂಜೂರಾದ ಒಟ್ಟು 266.27 ಎಕರೆ ವಿಸ್ತೀರ್ಣದ ಜಮೀನುಗಳ ಪೈಕಿ ಭಾಗಶಃ/ಪೂರ್ಣ ಷರತ್ತು ಉಲ್ಲಂಘನೆಯಾಗಿರುವ 109.38 ಎಕರೆ ಜಮೀನುಗಳಿಗೆ ಸಂಬಂಧಿಸಿದಂತೆ ಸದರಿ ಸಂಸ್ಥೆಯವರಿಂದ ಪ್ರಚಲಿತ ಮಾರ್ಗಸೂಚಿಯ ಬೆಲೆಯ ಮೂರು ಪಟ್ಟು ದಂಡವನ್ನು ವಸೂಲು ಮಾಡಿದ ನಂತರ, ಉದ್ದೇಶ ಬದಲಾವಣೆಗೆ ಘಟನೋತ್ತರ ಅನುಮತಿ ನೀಡಲು ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉದಯ ಆರ್. ನಾಯಕ್**

ಪೀಠಾಧಿಕಾರಿ,

ಕಂದಾಯ ಇಲಾಖೆ (ಭೂ.ಮಂ–2).

**P.R. 356**

**SC-20**

## COMMERCE AND INDUSTRIES SECRETARIAT

**Sub :** Reconstitution of State Level Export Promotion Committee (SLEPC) for Promotion of Exports from the State.

**Read :**
1. File No. VTPC/JD/SLEPC/2014-15.
2. Letter of the Managing Director, Visvesvaraya Trade Promotion Centre No. VTPC/IPO/ SLEPC/ ASIDE/2015-16, dt: 19/24.06.2015.
3. New Industrial Policy 2014-19.
4. G.O. No. CI 290 SPC 1994(P), dated 28.02.05.

**PREAMBLE :**

The State Government has announced Karnataka Industrial Policy 2014-19 vide G.O. No. CI 58 SPI 2013, Bangalore, dated 01.10.2014, wherein it is proposed to reconstitute the State Level Export Promotion Committee (SLEPC) with enhanced terms of reference by involving key Departments / Agencies of Central and State Government, representatives of Export Association, leading export houses and other stake holders for smooth coordination and for resolution of critical inter departmental issues to facilitate exports.

The Commissioner for Industrial Development & Director of Industries & Commerce has proposed to reconstitute the State Level Export Promotion Committee (SLEPC) under the Chairmanship of Chief Secretary to Government of Karnataka with Principal Secretaries / Secretaries and Head of the Departments of State & Central Government / Agencies to facilitate for the growth and development of the exports from the State with a definite set of terms of reference.

Hence, the following order:

### GOVERNMENT ORDER No. CI 168 CSC 2015, BENGALURU, DATED 22ND JULY, 2015.

After careful consideration of the recommendation of the Commissioner for Industrial Development & Director of Industries & Commerce the Government is pleased to reconstitute State Level Export Promotion Committee (SLEPC) to facilitate the growth and development of exports from the State. The structure and terms of reference of this Committee are as per Annexure-1 and Annexure-2 respectively appended to this Order.

By Order and in the name of the Governor of Karnataka,

**L.S. SRIKANTA BABU**

Under Secretary to Government (SSI)

Commerce & Industries Department.

**ANNEXURE-1**

**Annexure-1 to the G.O. No. CI 168 CSC 2015, dated: 22.07.2015**

**COMPOSITION OF SLEPC COMMITTEE**

| | | |
|---|---|---|
| 1 | Chief Secretary to<br>Govt. of Karnataka | Chairman |

| | | |
|---|---|---|
| 2 | The Additional Chief Secretary &<br>Principal Secretary to Govt.<br>Commerce & Industries Dept., | Member |
| 3 | The Additional Chief Secretary /<br>Principal Secretary to Govt.<br>Finance Department | Member |
| 4 | The Principal Secretary to Govt.<br>Agriculture Department | Member |
| 5 | The Principal Secretary to Govt.<br>Infrastructure Development Dept., | Member |
| 6 | The Principal Secretary to Govt.<br>Public Works, Ports & Inland Water<br>Transport Dept., | Member |
| 7 | The Principal Secretary to Govt.<br>Energy Dept., | Member |
| 8 | The Principal Secretary to Govt.<br>Water Resource Dept., | Member |
| 9 | The Principal Secretary to Govt.<br>Forest, Ecology & Environment | Member |
| 10 | The Principal Secretary to Govt.<br>Transport Dept., | Member |
| 11 | The Joint Secretary,<br>Karnataka Cell, Ministry of Commerce,<br>Government of India. | Member |
| 12 | The Secretary to Govt.<br>Labour Dept., | Member |
| 13 | Commissioner for Central Excise,<br>Govt of India, Bengaluru | Member |
| 14 | Commissioner of Customs<br>Govt of India, Bengaluru | Member |
| 15 | Convenor of SLBC<br>Syndicate Bank<br>Bengaluru | Member |
| 16 | The Regional Joint Director General of<br>Foreign Trade,<br>Bengaluru | Member |
| 17 | Joint Dy. Director General<br>FIEO, Bengaluru | Member |
| 18 | The Managing Director<br>VTPC | Member |
| 19 | The Commissioner for Industrial<br>Development and Director of<br>Industries and Commerce | Member Secretary |
| **Invitees:** | | |
| 1 | Commissioner for Commercial Taxes<br>Bengaluru | Invitees |

| | | |
|---|---|---|
| 2 | Member Secretary<br>Karnataka State Pollution Control<br>Board | Invitees |
| 3 | The President<br>FKCCI | Invitees |
| 4 | The President<br>KASSIA | Invitees |
| 5 | Representatives of Export Promotion<br>Councils (viz., APEDA, EPCH, AEPC,<br>EEPC, Basic chemicals) | Invitees |
| 6 | The Chairman,<br>Karnataka Committee,<br>Confederation of Indian Industry | Invitees |
| 7 | Sr. Asst. Director<br>FICCI<br>Bengaluru | Invitees |
| 8 | The Director<br>ASSOCHAM<br>Bengaluru | Invitees |

**ANNEXURE- 2**

**Annexure-2 to the G.O. No. CI 168 CSC 2015, dated: 22.07.2015**

**TERMS OF REFERENCE**

- To suggest measures with regard to the Industrial policy initiatives for preparation and implementation of short & long term plans to enhance the growth of exports in the light of emerging National and International economic scenario.
- To suggest addressal of infrastructural gaps such as land, water, power, road and rail connectivity, seaports, airports and other sector specific infrastructure which are essential to support the growth of exports from the State.
- To review export performance of various sectors and to suggest for addressing the constraints/bottlenecks that are hindering the growth of exports and also recommend industry specific measures for optimization of exports.
- To review the coordination of all agencies of Central / State Government / Trade bodies and Associations for growth and development of exports from the State.
- To advice on rationalization of procedures and documentation required by various Departments / agencies to facilitate exports.
- To suggest facilitation mechanism and ease of doing business to encourage exports from the State.
- To review existing institutional framework for imports and exports and suggest remedial measures to Government of India for further streamlining to achieve the desired objectives of Foreign Trade Policy.
- To review, monitor and formulate sector specific policies for sustained industrial development, thereby encouraging the exports.
- Review of implementation of Export Initiatives of the State as per Industrial Policy 2014-19.
- To advise on establishment of SEZs / EOUs, sector specific clusters / Parks in the State.
- To advise on strategies for development of export infrastructure on PPP mode.
- To advise on Capacity building and Skill set requirements to meet industry demand specific to exports.
- To suggest preparation of action plan for development of critical infrastructure and identification of shelf of projects under ASIDE scheme.
- To scrutinize, prioritize and approve specific projects and oversee the implementation of the projects under ASIDE scheme.

- Review of action initiated by various departments on the initiatives envisaged in the MoUs signed between State Government and regions of various countries / trade bodies.
- Review of the spectrum of IPR related initiatives for stakeholders representing academia, industry and Govemment to nurture the IP fabric of the State.
- To address the issues which are considered relevant / essential for promotion of International trade such as Labour related issues to support exports, reduced cost and easy access to export credit, hassle free movement of goods, approval for construction and operation from local planning authorities, safety and security of men and material etc.

**L.S. SRIKANTA BABU**

Under Secretary to Government (SSI)

Commerce & Industries Department.

**P.R. 433**

**S.C. 25**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ** : ಶ್ರೀ ನಾಗೇಂದ್ರ ಕುಮಾರ್, ನಿರ್ದೇಶಕರು, ಪಠ್ಯ ಪುಸ್ತಕ ಸಂಘ, ಶಿಕ್ಷಣ ಇಲಾಖೆ (ಹಿಂದಿನ ಉಪ ನಿರ್ದೇಶಕರು (ಆಡಳಿತ), ಸಾರ್ವಜನಿಕ ಶಿಕ್ಷಣ, ಮೈಸೂರು) ಮತ್ತು ಇತರ ಅಧಿಕಾರಿ/ಸಿಬ್ಬಂದಿಗಳ ವಿರುದ್ಧದ ಇಲಾಖಾ ವಿಚಾರಣೆಯನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957 ರ ನಿಯಮ 14–ಎ ರಡಿ ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ** :
1. ಉಪ ನಿಬಂಧಕರು, ವಿಚಾರಣೆಗಳು–4, ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂಖ್ಯೆ: ಕಂಪ್ಲೇಂಟ್/ಉಪಲೋಕ್/ಎಂವೈಎಸ್–381/2011/ಡಿಆರ್‌ಇ–4, ದಿನಾಂಕ: 22–06–2015.
2. ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಇಡಿ 26 ಡಿಜಿಪಿ 2015, ದಿನಾಂಕ: 26–06–2015.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿ ಉಪ ನಿಬಂಧಕರು, ವಿಚಾರಣೆಗಳು–4, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ, ಶ್ರೀ ನಾಗೇಂದ್ರ ಕುಮಾರ್, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು ಜಿಲ್ಲೆ ಮೈಸೂರು (ಪ್ರಸ್ತುತ ನಿರ್ದೇಶಕರು, ಪಠ್ಯಪುಸ್ತಕ ಸಂಘ, ಶಿಕ್ಷಣ ಇಲಾಖೆ, ಬೆಂಗಳೂರು, ಶ್ರೀ ಚಂದ್ರಪಾಟೀಲ್.ಎಸ್, ಕ್ಷೇತ್ರ ಶಿಕ್ಷಣಾಧಿಕಾರಿ, ನಂಜನಗೂಡು, ಮೈಸೂರು ಜಿಲ್ಲೆ, ಶ್ರೀ ಕೃಷ್ಣಮೂರ್ತಿ, ಪ್ರಥಮ ದರ್ಜೆ ಸಹಾಯಕರು, ಕ್ಷೇತ್ರ ಶಿಕ್ಷಣಾಧಿಕಾರಿ ಕಛೇರಿ, ನಂಜನಗೂಡು, ಮೈಸೂರು ಜಿಲ್ಲೆ ಮತ್ತು ಶ್ರೀ ಜಿ.ಕೆ. ಪುಟ್ಟರಾಜು, ಪತ್ರಾಂಕಿತ ವ್ಯವಸ್ಥಾಪಕರು, ಕ್ಷೇತ್ರ ಶಿಕ್ಷಣಾಧಿಕಾರಿ ಕಛೇರಿ, ನಂಜನಗೂಡು, ಮೈಸೂರು ಜಿಲ್ಲೆ, ಇವರ ವಿರುದ್ಧ, 2010–11ನೇ ಸಾಲಿಗೆ ಉಚಿತ ಪಠ್ಯಪುಸ್ತಕಗಳು ಮತ್ತು ಸಮವಸ್ತ್ರಗಳ ಸಾಗಣಿಕೆಗೆ ಎಂದು ನೀಡಿದ್ದ ಅನುದಾನವನ್ನು ದುರುಪಯೋಗಪಡಿಸಿಕೊಂಡಿರುವುದಾಗಿ ಶ್ರೀ ಕೆ. ಮಹದೇವ, ನಂಜನಗೂಡು, ಮೈಸೂರು ಜಿಲ್ಲೆ ಇವರು ಸಲ್ಲಿಸಿದ ದೂರಿಗೆ ಸಂಬಂಧಿಸಿದಂತೆ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ 12(3)ರಡಿ ತನಿಖೆಯನ್ನು ನಡೆಸಿದ್ದು, ಅದರಂತೆ ಲೋಕಾಯುಕ್ತ ತನಿಖೆಯಲ್ಲಿ ಶ್ರೀ ನಾಗೇಂದ್ರ ಕುಮಾರ್, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು, ಶ್ರೀ ಚಂದ್ರಪಾಟೀಲ್ ಎಸ್., ಕ್ಷೇತ್ರ ಶಿಕ್ಷಣಾಧಿಕಾರಿ, ನಂಜನಗೂಡು, ಮೈಸೂರು ಜಿಲ್ಲೆ ಹಾಗೂ ಶ್ರೀ ಜಿ.ಕೆ. ಪುಟ್ಟರಾಜು, ಪತ್ರಾಂಕಿತ ವ್ಯವಸ್ಥಾಪಕರು, ಕ್ಷೇತ್ರ ಶಿಕ್ಷಣಾಧಿಕಾರಿ ಕಛೇರಿ, ನಂಜನಗೂಡು, ಮೈಸೂರು ಜಿಲ್ಲೆ ಇವರು ಮೇಲ್ನೋಟಕ್ಕೆ ತಪ್ಪಿತಸ್ಥರೆಂದು ಕಂಡು ಬಂದಿದ್ದು, ಸದರಿ ಅಧಿಕಾರಿಗಳ ವಿರುದ್ಧ ಈ ಕೆಳಕಂಡ ಆರೋಪಕ್ಕೆ ಸಂಬಂಧಿಸಿದಂತೆ, ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಾವಳಿಗಳು, 1957ರ ನಿಯಮ 14 (ಎ) ಅನ್ವಯ ಇಲಾಖಾ ವಿಚಾರಣೆಯನ್ನು ಕರ್ನಾಟಕ ಲೋಕಾಯುಕ್ತಕ್ಕೆ ವಹಿಸುವಂತೆ ಶಿಫಾರಸ್ಸು ಮಾಡಿರುವ ವರದಿಯನ್ನು ತಮ್ಮ ಪತ್ರದೊಂದಿಗೆ ಲಗತ್ತಿಸಿ ಕಳುಹಿಸಿದ್ದಾರೆ.

"ಆರೋಪಿತ ಅಧಿಕಾರಿಗಳು 2010–2011ನೇ ಸಾಲಿನಲ್ಲಿ ನಂಜನಗೂಡು ತಾಲ್ಲೂಕಿನ 273 ಪ್ರಾಥಮಿಕ ಶಾಲೆಗಳಿಗೆ ಉಚಿತ ಪಠ್ಯಪುಸ್ತಕ ಮತ್ತು ಸಮವಸ್ತ್ರಗಳನ್ನು ತಲುಪಿಸಲು ಒದಗಿಸಿದ ಸಾರಿಗೆ ವೆಚ್ಚದ ಅನುದಾನವನ್ನು ನಕಲಿ ದಾಖಲೆಗಳ ಸೃಷ್ಟಿಸುವ ಮೂಲಕ ಲಕ್ಷಾಂತರ ರೂಪಾಯಿಗಳ ದುರುಪಯೋಗ ಮಾಡಿದ್ದು, ಸರ್ಕಾರವು 2010–11ನೇ ಸಾಲಿನಲ್ಲಿ ಒದಗಿಸಿದ ಉಚಿತ ಪಠ್ಯಪುಸ್ತಕ ಮತ್ತು ಸಮವಸ್ತ್ರಗಳನ್ನು ನಂಜನಗೂಡು ತಾಲ್ಲೂಕಿನ ಸರ್ಕಾರಿ ಶಾಲೆಗಳ ಮುಖ್ಯೋಪಾಧ್ಯಾಯರುಗಳು ಮತ್ತು ಸಹ ಶಿಕ್ಷಕರುಗಳು ತಮ್ಮ ಶಾಲೆಗೆ ನೀಡಿದ ಪಠ್ಯಪುಸ್ತಕ ಮತ್ತು ಸಮವಸ್ತ್ರಗಳ ಸಾಗಾಣಿಕೆ ವೆಚ್ಚವನ್ನು ಶಾಲೆಗೆ ಒದಗಿದ ಎಸ್.ಡಿ.ಎಂ.ಸಿ ಅನುದಾನದಲ್ಲಿ ಭರಿಸಿದ್ದು, ಆರೋಪಿತ ಅಧಿಕಾರಿಗಳು ಒಂದೇ ಕಾರ್ಯಕ್ಕೆ ಎರಡು ಬಾರಿ ವೆಚ್ಚವನ್ನು ಮಾಡಿ ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟು ಮಾಡಿರುತ್ತಾರೆ."

ಮೇಲೆ ಓದಲಾದ (2) ರ ಅನಧಿಕೃತ ಟಿಪ್ಪಣಿಯಲ್ಲಿ ಶಿಕ್ಷಣ ಇಲಾಖೆಯು ಆರೋಪಿತ ಅಧಿಕಾರಿಗಳ ವಿರುದ್ಧದ ಇಲಾಖಾ ವಿಚಾರಣೆಯನ್ನು ಲೋಕಾಯುಕ್ತಕ್ಕೆ ವಹಿಸುವ ಬಗ್ಗೆ ಅಗತ್ಯ ಕ್ರಮವನ್ನು ವಹಿಸುವಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯನ್ನು ಕೋರಿದೆ.

ಪ್ರಸ್ತಾವನೆಯನ್ನು ನಿಯಮಾನುಸಾರ ಸಂಬಂಧಿಸಿದ ದಾಖಲಾತಿಗಳೊಂದಿಗೆ ಪರಿಶೀಲಿಸಿದ ಆರೋಪಿತ ಅಧಿಕಾರಿಗಳಾದ ಶ್ರೀ ನಾಗೇಂದ್ರ ಕುಮಾರ್, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು, ಶ್ರೀ ಚಂದ್ರಪಾಟೀಲ್ ಎಸ್., ಕ್ಷೇತ್ರ ಶಿಕ್ಷಣಾಧಿಕಾರಿ, ನಂಜನಗೂಡು, ಮೈಸೂರು ಜಿಲ್ಲೆ ಹಾಗೂ ಶ್ರೀ ಜಿ.ಕೆ. ಪುಟ್ಟರಾಜು, ಪತ್ರಾಂಕಿತ ವ್ಯವಸ್ಥಾಪಕರು, ಕ್ಷೇತ್ರ ಶಿಕ್ಷಣಾಧಿಕಾರಿ ಕಛೇರಿ, ನಂಜನಗೂಡು, ಮೈಸೂರು ಜಿಲ್ಲೆ ಇವರುಗಳಿಂದ ಸರ್ಕಾರಕ್ಕೆ ಆರ್ಥಿಕ ನಷ್ಟವುಂಟಾಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಇವರುಗಳ ವಿರುದ್ಧದ ಆರೋಪಗಳಿಗೆ ಸಂಬಂಧಿಸಿದಂತೆ, ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯುವುದಕ್ಕಾಗಿ ಪ್ರಕರಣವನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 14(ಎ) ಅನ್ವಯ ಇಲಾಖಾ ವಿಚಾರಣೆಯನ್ನು ನಡೆಸಲು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸುವುದು ಸೂಕ್ತವೆಂದು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 111ಸೇಇಮು 2015, ದಿನಾಂಕ: 29 ಜೂನ್, 2015,**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಈ ಕೆಳಕಂಡ ಅಧಿಕಾರಿಗಳ ವಿರುದ್ಧ ಮೇಲೆ ಹೇಳಲಾದ ಆರೋಪಗಳ ಕುರಿತು ಇಲಾಖಾ ವಿಚಾರಣೆಯನ್ನು ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ರ ನಿಯಮ 14(ಎ) ಅನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಿದೆ.

1. ಶ್ರೀ ನಾಗೇಂದ್ರ ಕುಮಾರ್, ನಿರ್ದೇಶಕರು, ಪಠ್ಯಪುಸ್ತಕ ಸಂಘ, ಶಿಕ್ಷಣ ಇಲಾಖೆ (ಹಿಂದಿನ ಉಪ ನಿರ್ದೇಶಕರು (ಆಡಳಿತ), ಸಾರ್ವಜನಿಕ ಶಿಕ್ಷಣ ಇಲಾಖೆ, ಮೈಸೂರು)
2. ಶ್ರೀ ಚಂದ್ರಪಾಟೀಲ್ ಎಸ್, ಕ್ಷೇತ್ರ ಶಿಕ್ಷಣಾಧಿಕಾರಿ, ನಂಜನಗೂಡು, ಮೈಸೂರು ಜಿಲ್ಲೆ.
3. ಶ್ರೀ ಜಿ.ಕೆ. ಪುಟ್ಟರಾಜು, ಪತ್ರಾಂಕಿತ ವ್ಯವಸ್ಥಾಪಕರು, ಕ್ಷೇತ್ರ ಶಿಕ್ಷಣಾಧಿಕಾರಿ ಕಛೇರಿ, ನಂಜನಗೂಡು, ಮೈಸೂರು ಜಿಲ್ಲೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ: ಗೀತಾ.ಎಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**PR-424**

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ** : ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಲ್ಲಿ ಮಹಿಳಾ ಉದ್ಯಮಶೀಲರ ಮಾರ್ಗದರ್ಶನ ಕೇಂದ್ರವನ್ನು ಸ್ಥಾಪಿಸುವ ಬಗ್ಗೆ.

**ಓದಲಾಗಿದೆ** : ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕೈ&ವಾ/ಯೋಜನೆ/ಮ.ಉ.ಮಾ.ಕೇ/2015–16, ದಿನಾಂಕ: 07–05–2015.

**ಪ್ರಸ್ತಾವನೆ:**

2015–16ನೇ ಸಾಲಿನ ಆಯವ್ಯಯದಲ್ಲಿ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ವ್ಯಾಪ್ತಿಗೆ ಒಳಪಡುವಂತೆ ಹಲವು ಹೊಸ ಯೋಜನೆಗಳನ್ನು ಘೋಷಿಸಲಾಗಿದ್ದು, ಅವುಗಳಲ್ಲಿ ಕಂಡಿಕೆ – 412ರಲ್ಲಿ ಹೊಸ ಕೈಗಾರಿಕಾ ನೀತಿಯನ್ವಯ **'ಮಹಿಳಾ ಉದ್ಯಮಶೀಲರ ಮಾರ್ಗದರ್ಶನ ಕೇಂದ್ರಗಳನ್ನು ಸ್ಥಾಪಿಸಲಾಗುವುದು'** ಎಂದು ಘೋಷಿಸಲಾಗಿರುತ್ತದೆ.

ಅದರಂತೆ, ಮೇಲೆ ಓದಲಾದ ಆಯುಕ್ತರು, ಕೈಗಾರಿಕಾಭಿವೃದ್ಧಿ ಮತ್ತು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರ ಪತ್ರದಲ್ಲಿ 2015–16ನೇ ಸಾಲಿನಿಂದ ಮಹಿಳಾ ಉದ್ದಿಮೆಗಳಿಗೆ ಹೆಚ್ಚಿನ ಮಟ್ಟದ ಬೆಳವಣಿಗೆಗೆ ಪ್ರೋತ್ಸಾಹ ನೀಡುವ ಉದ್ದೇಶದಿಂದ ಈಗಾಗಲೇ ಪ್ರಾರಂಭಿಸಲಾಗಿರುವ / ಪ್ರಾರಂಭಿಸಲು ಆಸಕ್ತಿ ಇರುವ ಮಹಿಳಾ ಉದ್ಯಮಿಗಳು ಎದುರಿಸುವ ತೊಡಕುಗಳನ್ನು ನಿವಾರಿಸಲು ಮಹಿಳಾ ಮಾರ್ಗದರ್ಶನ ಕೇಂದ್ರದಲ್ಲಿ ನಿರಂತರವಾಗಿ ಮಾಹಿತಿಯನ್ನು ಒದಗಿಸಲಾಗುವುದು. ಈ ಉದ್ದೇಶಕ್ಕಾಗಿ 'ತಂತ್ರಜ್ಞಾನ ತರಬೇತಿಗಳ ಸಂಸ್ಥೆಗಳಿಗೆ ನೆರವು' ಲೆಕ್ಕಶೀರ್ಷಿಕೆ 2851–00–102–0–69(059) ಇತರೆ ಖರ್ಚುಗಳು ಯೋಜನೆಯಡಿ ₹. 15.75 ಲಕ್ಷಗಳನ್ನು 'ಮಹಿಳಾ ಉದ್ಯಮಶೀಲರ ಮಾರ್ಗದರ್ಶನ ಕೇಂದ್ರ'ವನ್ನು ಸ್ಥಾಪಿಸುವುದಕ್ಕಾಗಿ ವಿನಿಯೋಗಿಸಲು ಯೋಜಿಸಿದ್ದು, ಸರ್ಕಾರದ ಅನುಮೋದನೆಗಾಗಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 144 ಸಿಎಸ್‌ಸಿ 2015, ಬೆಂಗಳೂರು, ದಿನಾಂಕ: 06–07–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, 2015–16ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ, ಮಹಿಳಾ ಉದ್ದಿಮೆದಾರರಿಗೆ ಮಾಹಿತಿ, ಮಾರ್ಗದರ್ಶನ ಮತ್ತು ಉತ್ತೇಜನ ನೀಡಲು 'ಮಹಿಳಾ ಉದ್ಯಮಶೀಲರ ಮಾರ್ಗದರ್ಶನ ಕೇಂದ್ರ'ವನ್ನು ಸ್ಥಾಪಿಸಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಮಹಿಳಾ ಉದ್ಯಮಶೀಲರ ಮಾರ್ಗದರ್ಶನ ಕೇಂದ್ರದ ಕಾರ್ಯಚಟುವಟಿಕೆಗಳನ್ನು ಈ ಕೆಳಕಂಡ ಅಂಶಗಳಿಗೆ ಸೀಮಿತಗೊಳಿಸತಕ್ಕದ್ದು.

- ಇಲಾಖೆಯ ಯೋಜನೆಗಳನ್ನು ಮಹಿಳಾ ಮಾರ್ಗದರ್ಶನ ಕೇಂದ್ರದ ಸಹಯೋಗದೊಂದಿಗೆ ಯೋಜನೆಗಳ ಕುರಿತು ಮಾಹಿತಿ ಒದಗಿಸುವುದು.
- ರಾಜ್ಯ / ಕೇಂದ್ರ ಸರ್ಕಾರದ ಅನುಷ್ಠಾನಗೊಳಿಸಲಾಗುವ ಯೋಜನೆಗಳಲ್ಲಿ ಸಾಲ ಪಡೆಯುವ ಮಾಹಿತಿಯನ್ನು ಒದಗಿಸುವುದು.
- ಉಚಿತ ಟೆಂಡರ್ ಅರ್ಜಿಗಳು ಮತ್ತಿತರೆ ಸೌಲಭ್ಯಗಳನ್ನು ಮಹಿಳಾ ಅರ್ಜಿದಾರರಿಗೆ ಒದಗಿಸುವುದು.
- ಮಹಿಳಾ ಉದ್ದಿಮೆಗಾಗಿ ಪ್ರತ್ಯೇಕವಾದ ವೆಂಡರ್ ಡೆವೆಲಪ್‌ಮೆಂಟ್ ಕಾರ್ಯಕ್ರಮಗಳನ್ನು ಇಲಾಖೆಯ ಮೂಲಕ ಆಯೋಜಿಸುವುದು.
- ಮೇಲಿನ ಧ್ಯೇಯೋದ್ದೇಶಗಳನ್ನು ಆಸಕ್ತ ಭಾವಿ ಮಹಿಳಾ ಉದ್ಯಮಶೀಲರಿಗೆ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಲು / ಮಾಹಿತಿ ತಲುಪಿಸುವುದು.

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ 33 ಎಫ್‌ಆರ್‌ಓ 2015, ದಿನಾಂಕ: 25–05–2015 ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 599 ವೆಚ್ಚ–1 2015, ದಿನಾಂಕ: 24–06–2015 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್.ಎಸ್. ಶ್ರೀಕಂಠಬಾಬು**

ಸರ್ಕಾರದ ಅಧೀನ ಕಾರ್ಯದರ್ಶಿ [ಸಪ್ರಕೈ],

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

PR-425

SC-25

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಬೆಳಗಾವಿ ವಿಧಾನಮಂಡಲದ ಅಧಿವೇಶನದಲ್ಲಿ ಭಾಗವಹಿಸಿದ / ಭಾಗವಹಿಸುವ ಅಧಿಕಾರಿ/ನೌಕರರುಗಳಿಗೆ ಊಟದ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1. ಸಂಸದೀಯ ವ್ಯವಹಾರಗಳ ಇಲಾಖೆ, ಕಡತ ಸಂಖ್ಯೆ:ಡಿಪಿಎಎಲ್ 277 ಆಡಳಿತ 2014.
2. ಮುಖ್ಯಮಂತ್ರಿಯವರ ಸಚಿವಾಲಯದ ಕಡತದ ಸಂಖ್ಯೆ:ಸಿಎಂ 161 ಜಿಇಎನ್ 2014.
3. ದಿನಾಂಕ: 26–11–2014ರಂದು ಮಾನ್ಯ ಸಭಾಪತಿ, ಕರ್ನಾಟಕ ವಿಧಾನ ಪರಿಷತ್ ಹಾಗೂ ಮಾನ್ಯ ಸಭಾಧ್ಯಕ್ಷರು, ಕರ್ನಾಟಕ ವಿಧಾನಸಭೆ ಇವರುಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿ.

**ಪ್ರಸ್ತಾವನೆ:**

ಮೇಲಿನ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಸಂಸದೀಯ ವ್ಯವಹಾರಗಳ ಇಲಾಖೆಯ ಕಡತದಲ್ಲಿ ದಿನಾಂಕ: 09–12–2014 ರಿಂದ ಬೆಳಗಾವಿಯಲ್ಲಿ ನಡೆಯಲಿರುವ ಅಧಿವೇಶನಕ್ಕೆ ನಿಯೋಜಿಸಲ್ಪಡುವ ಸಂಸದೀಯ ವ್ಯವಹಾರಗಳ ಇಲಾಖೆಯ 40 ಅಧಿಕಾರಿ/ನೌಕರರುಗಳಿಗೆ ಕರ್ನಾಟಕ ವಿಧಾನಸಭೆಯ ಸಚಿವಾಲಯದ ಆದೇಶ ಸಂಖ್ಯೆ:ಕವಿಸಸ/ಆ–3/271/ಬೆಅ.ಹೆಊಭಪಾ/2014, ದಿನಾಂಕ: 29–11–2014 ರಲ್ಲಿ ಬೆಳಗಾವಿಯಲ್ಲಿ ನಡೆಯಲಿರುವ ಅಧಿವೇಶನದಲ್ಲಿ ರಾತ್ರಿ ಊಟದ ವ್ಯವಸ್ಥೆಯನ್ನು ಕಲ್ಪಿಸಲು ತೊಂದರೆಯಾಗುವುದರಿಂದ ಸದರಿ ಅಧಿವೇಶನದ ದಿನಗಳಂದು ರಾತ್ರಿ ಊಟದ ವ್ಯವಸ್ಥೆಯನ್ನು ಅಧಿಕಾರಿಯವರೇ ಮಾಡಿಕೊಳ್ಳಬೇಕಾಗಿರುವುದರಿಂದ, ದಿನ ಒಂದಕ್ಕೆ ₹.750/– ಗಳ ಊಟದ ಭತ್ಯೆಯನ್ನು ಮಂಜೂರು ಮಾಡಿ ಆದೇಶಿಸಿರುತ್ತದೆ. ಆದ್ದರಿಂದ, ವಿಧಾನಮಂಡಲದ ನೌಕರರಿಗೆ ನೀಡಿದಂತೆ ದಿನಾಂಕ: 09–12–2014ರಿಂದ 20–12–2014ರವರೆಗೆ ನಡೆಯಲಿರುವ ಬೆಳಗಾವಿ ಸುವರ್ಣ ವಿಧಾನಸೌಧದ ಅಧಿವೇಶನಕ್ಕೆ ₹.750/–ಊಟದ ಭತ್ಯೆ ಮಂಜೂರು ಮಾಡುವಂತೆ ಕೋರಲಾಗಿದೆ.

ಮೇಲಿನ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ಮುಖ್ಯಮಂತ್ರಿಯವರ ಸಚಿವಾಲಯದ ಕಡತದಲ್ಲಿ ಕರ್ನಾಟಕ ವಿಧಾನಮಂಡಲ ಸಚಿವಾಲಯವು ದಿನಾಂಕ: 29–11–2014 ರ ಆದೇಶದಲ್ಲಿ ದಿನಾಂಕ: 09–12–2014ರಿಂದ ಪ್ರಾರಂಭವಾದ ಬೆಳಗಾವಿ ವಿಧಾನಮಂಡಲ ಅಧಿವೇಶನಕ್ಕೆ ನಿಯೋಜಿಸಿರುವ ಅಧಿಕಾರಿ/ನೌಕರರಿಗೆ ₹.750/– ಗೌರವಧನ ಜೊತೆಗೆ ಹೆಚ್ಚುವರಿಯಾಗಿ ₹.750/– ಊಟದ ಭತ್ಯೆ ಪಾವತಿಸಲು ಆದೇಶ ಹೊರಡಿಸಿರುತ್ತದೆ. ಅದೇ ರೀತಿಯಲ್ಲಿ ಬೆಳಗಾವಿ ವಿಧಾನಮಂಡಲ ಅಧಿವೇಶನಕ್ಕೆ ಸಂಬಂಧಿಸಿದಂತೆ ಮಾನ್ಯ ಮುಖ್ಯಮಂತ್ರಿಯವರ ಸಚಿವಾಲಯದಲ್ಲಿ ನಿಯೋಜನೆ ಮತ್ತು ಅನ್ಯಕಾರ್ಯದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ/ನೌಕರರುಗಳಿಗೆ ಈಗ ನೀಡುತ್ತಿರುವ ಗೌರವ ಧನ ₹.500/– ಗಳ ಜೊತೆಗೆ ₹.500/– ಗಳ ಗೌರವಧನ ಹಾಗೂ ₹.500/– ಊಟದ ಭತ್ಯೆ ಮಂಜೂರು ಮಾಡುವಂತೆ ಹಾಗೂ ಗುತ್ತಿಗೆ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿ/ನೌಕರರುಗಳಿಗೆ ಈಗ ನೀಡುತ್ತಿರುವ ಗೌರವಧನ ₹.250/– ಗಳ ಜೊತೆಗೆ ಹೆಚ್ಚುವರಿಯಾಗಿ ₹.250/– ಗೌರವಧನ ಹಾಗೂ ₹.500/– ಗಳ ಊಟದ ಭತ್ಯೆಯನ್ನು ಮಂಜೂರು ಮಾಡುವಂತೆ ಕೋರಲಾಗಿದೆ.

ಮೇಲಿನ ಕ್ರಮ ಸಂಖ್ಯೆ: (3)ರಲ್ಲಿ ಓದಲಾದ ದಿನಾಂಕ: 26–11–2014 ರಂದು ಮಾನ್ಯ ಸಭಾಪತಿ, ಕರ್ನಾಟಕ ವಿಧಾನ ಪರಿಷತ್ ಹಾಗೂ ಮಾನ್ಯ ಸಭಾಧ್ಯಕ್ಷರು, ಕರ್ನಾಟಕ ವಿಧಾನಸಭೆ ಇವರುಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿಯಲ್ಲಿ ದಿನಾಂಕ: 09–12–2014 ರಿಂದ 20–

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



12–2014 ರವರೆಗೆ ಬೆಳಗಾವಿಯ ಸುವರ್ಣ ವಿಧಾನಸೌಧದಲ್ಲಿ ನಡೆಯುವ ವಿಧಾನ ಮಂಡಲದ ಅಧಿವೇಶನದ ಪೂರ್ವಭಾವಿ ಸಿದ್ಧತೆಯ ಬಗ್ಗೆ ಸಭೆಯಲ್ಲಿ ಚರ್ಚಿಸಿದ್ದು, ಸಭಾ ನಡವಳಿಯ ಕ್ರಮ ಸಂಖ್ಯೆ:4ರಲ್ಲಿ ಈ ಕೆಳಕಂಡಂತೆ ತೀರ್ಮಾನಿಸಲಾಗಿರುತ್ತದೆ.

4) ಸರ್ಕಾರದ ವಿವಿಧ ಇಲಾಖೆಗಳ ಅಧಿಕಾರಿಗಳು ಸಹ ಅಧಿವೇಶನಕ್ಕೆ ಆಗಮಿಸಲಿರುವುದರಿಂದ ಹಾಗೂ ಅವರಿಗೆ ರಾತ್ರಿ ವೇಳೆಯಲ್ಲಿ ಊಟದ ವ್ಯವಸ್ಥೆ ಇಲ್ಲದಿರುವುದರಿಂದ ಅವರುಗಳಿಗೆ ಊಟದ ಬದಲು ₹.300/– ಗಳನ್ನು Dinner Allowance ಸಂಬಂಧಪಟ್ಟ ಇಲಾಖೆಯವರೇ ನೀಡಬೇಕೆಂದು ತೀರ್ಮಾನಿಸಲಾಯಿತು.

ಮೇಲ್ಕಂಡ ಪ್ರಸ್ತಾವನೆಗಳ ಬಗ್ಗೆ ಹಾಗೂ ದಿನಾಂಕ: 26–11–2014ರಂದು ಮಾನ್ಯ ಸಭಾಪತಿ, ಕರ್ನಾಟಕ ವಿಧಾನ ಪರಿಷತ್ ಹಾಗೂ ಮಾನ್ಯ ಸಭಾಧ್ಯಕ್ಷರು, ಕರ್ನಾಟಕ ವಿಧಾನಸಭೆ ಇವರುಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡವಳಿ ತೀರ್ಮಾನದ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ ಬೆಳಗಾವಿ ವಿಧಾನಮಂಡಲ ಅಧಿವೇಶನದಲ್ಲಿ ಹಾಜರಾದ ಹಾಗೂ ಮುಂದೆ ಹಾಜರಾಗುವ ಸರ್ಕಾರದ ಎಲ್ಲಾ ಇಲಾಖೆಗಳ ಅಧಿಕಾರಿ/ನೌಕರರಿಗೆ ಏಕರೂಪವಾಗಿ ಊಟದ ಭತ್ಯೆ ಪಾವತಿಸಲು ತೀರ್ಮಾನಿಸಿ ಬೆಳಗಾವಿ ಸುವರ್ಣ ವಿಧಾನಸೌಧದಲ್ಲಿ ದಿನಾಂಕ: 09–12–2014 ರಿಂದ 20–12–2014 ರಂದು ನಡೆದ ವಿಧಾನ ಮಂಡಲದ ಅಧಿವೇಶನದಲ್ಲಿ ಹಾಜರಾದ ಹಾಗೂ ಮುಂದೆ ಬೆಳಗಾವಿಯಲ್ಲಿ ನಡೆಯುವ ವಿಧಾನಮಂಡಲದ ಅಧಿವೇಶನಗಳಿಗೆ ಹಾಜರಾಗುವ ಎಲ್ಲಾ ಇಲಾಖೆಗಳ ಅಧಿಕಾರಿ/ನೌಕರರುಗಳಿಗೆ ಇತರೆ ಯಾವುದೇ ಮೂಲಗಳಿಂದ ಊಟದ ಭತ್ಯೆಯನ್ನು ಸೆಳೆಯದೇ ಇರುವ ಷರತ್ತಿಗೊಳಪಟ್ಟು ಹಾಜರಾದ ದಿನವೊಂದಕ್ಕೆ ₹.500/– (ಐದುನೂರು) ಗಳಂತೆ ಊಟದ ಭತ್ಯೆಯನ್ನು (Dinner Allowance) ಮಂಜೂರು ಮಾಡಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 17 ಸಉಸೇ 2015 ಬೆಂಗಳೂರು, ದಿನಾಂಕ: 24ನೇ ಜುಲೈ, 2015.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾವಿ ಸುವರ್ಣ ವಿಧಾನಸೌಧದಲ್ಲಿ ದಿನಾಂಕ: 09–12–2014 ರಿಂದ 20–12–2014 ರಂದು ನಡೆದ ವಿಧಾನ ಮಂಡಲದ ವಿಶೇಷ ಅಧಿವೇಶನ ಸೇರಿದಂತೆ ತದನಂತರವೂ ಬೆಳಗಾವಿ ಸುವರ್ಣ ವಿಧಾನಸೌಧದಲ್ಲಿ ನಡೆದ/ನಡೆಯಲಿರುವ ವಿಧಾನ ಮಂಡಲ ವಿಶೇಷ ಅಧಿವೇಶನಗಳಿಗೆ ಹಾಜರಾದ/ಹಾಜರಾಗುವ ಎಲ್ಲಾ ಇಲಾಖೆಗಳ ಅಧಿಕಾರಿ/ನೌಕರರುಗಳಿಗೆ ಇತರೆ ಯಾವುದೇ ಮೂಲಗಳಿಂದ ಊಟದ ಭತ್ಯೆಯನ್ನು ಸೆಳೆಯದೇ ಇರುವ ಷರತ್ತಿಗೊಳಪಟ್ಟು ಹಾಜರಾದ ದಿನವೊಂದಕ್ಕೆ ₹.500/–(ಐದು ನೂರು) ಗಳಂತೆ ಊಟದ ಭತ್ಯೆಯನ್ನು (Dinner Allowance) ಮಂಜೂರು ಮಾಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅಧಿಕೃತ ಟಿಪ್ಪಣಿ ಸಂಖ್ಯೆ:ಆಇ 123 ಸೇವೆಗಳು–2/2015, ದಿನಾಂಕ: 15–07–2015ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಚಂದ್ರಶೇಖರ**

ಸರ್ಕಾರದ ಅಧೀನ ಕಾರ್ಯದರ್ಶಿ

**P.R. 452** ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–6)

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59